# ವಿಷಯಸೂಚಿಕೆ

ಪದ್ಯ



## ಆಶ್ವಾಸ ೪

# ಪೀಠಿಕೆ



'ಕವಿಜಿಹ್ವಾಬಂಧನ'ದ ಓಲೆಯ ಹಸ್ತಪ್ರತಿಯೊಂದು ಬೆಂಗಳೂರು ವಿಶ್ವೇಶ್ವರಪುರದಲ್ಲಿದ್ದ ಶ್ರೀ ಕವಿ ಲಿಂಗಣ್ಣಯ್ಯನವರಲ್ಲಿ ಸುಮಾರು ಹದಿನೈದು ವರ್ಷಗಳ ಕೆಳಗೆ ದೊರೆಯಿತು. ಅವರು ಕೆಳದಿನೃಪವಿಜಯದ ಕರ್ತೃಗಳಾದ ಲಿಂಗಣ್ಣಕವಿಯ ವಂಶಿಕರಂತೆ. ಆದ್ದರಿಂದ ಈ ಗ್ರಂಥವು ಲಿಂಗಣ್ಣ ಕವಿಗಳು ಶೇಖರಿಸಿದ್ದಿರಬಹುದು. ಇದರೊಡನೆ ಶಬ್ದಮಣಿದರ್ಪಣ ಮುಂತಾದ ಇನ್ನೂ ಕೆಲವು ಲಕ್ಷಣಗ್ರಂಥಗಳು ಇದ್ದಂತೆ ನನಗೆ ಜ್ಞಾಪಕ.

ಅದುವರೆಗೆ ನಮಗೆ ಆಗಿದ್ದ ಈ ಗ್ರಂಥದ ಪರಿಚಯ ರಾ|| ನರಸಿಂಹಾಚಾರ್ಯರ ಕವಿಚರಿತೆಯಿಂದ (ಸಂಪುಟ II ಪುಟ ೧೫೦-೧೫೧), ಕಿಟ್ಟೆಲ್ ಅವರ ಛಂದೋಂಬುಧಿಯ ಪೀಠಿಕೆಯಿಂದ (LXI), ಮತ್ತು ರೈಸ್ ಅವರ ಶಬ್ದಾನುಶಾಸನದ ಪೀಠಿಕೆಯಿಂದ (ಪುಟ ೪೧).

ನರಸಿಂಹಾಚಾರ್ಯರಿಗೆ ದೊರೆತ ಪ್ರತಿ ಅಸಮಗ್ರ; ಎರಡನೆಯ ಪರಿಚ್ಛೇದ ಮಾತ್ರ ದೊರೆಯಿತೆಂದು ಅವರೇ ಹೇಳಿದ್ದಾರೆ. ಇದೇ, ಪ್ರಾಯಶಃ, ಪಂಡಿತ ಎಚ್. ಶೇಷಯ್ಯಂಗಾರ್ಯರು ಉಪಯೋಗಿಸಿಕೊಂಡ 'ಖ' ಪ್ರತಿ. ರೈಸ್ ಕಿಟ್ಟೆಲ್ ಅವರಿಗೆ ದೊರೆತ ಪ್ರತಿಗಳು ಹೇಗಿದ್ದುವೋ ತಿಳಿಯದು. ಅವುಗಳಲ್ಲಿ ನಾಲ್ಕು ಪರಿಚ್ಛೇದಗಳಿದ್ದಿರಬೇಕೆಂಬುದು ಅವರ ಹೇಳಿಕೆಯಿಂದಲೇ ಸ್ಪಷ್ಟಪಡುತ್ತದೆ.

## ಮೂರು ಮುದ್ರಣಗಳು

ಪಂಡಿತ ಎಚ್. ಶೇಷಯ್ಯಂಗಾರ್ಯರು ಮೂರು ಅಸಮಗ್ರ ಅಶುದ್ಧ ಪ್ರತಿಗಳ ಸಹಾಯದಿಂದ ಇದನ್ನು ಮೊದಲು Annals of Oriental Research ಪತ್ರಿಕೆಯಲ್ಲಿ (ಸಂಪುಟ III ಮತ್ತು IV; ೧೯೩೯) ವಿಸ್ತಾರವಾದ ಮುನ್ನುಡಿಯೊಡನೆಯೂ ನಾಲ್ಕು ಪರಿಶಿಷ್ಟಗಳೊಡನೆಯೂ ಪ್ರಕಟಿಸಿದರು. ಇದು 'ಕವಿಜಿಹ್ವಾಬಂಧನಂ, ಈಶ್ವರ ಕವಿ ವಿರಚಿತಂ' ಎಂದು ಆರಂಭವಾದರೂ 'ಇತಿ ಬಾಣಕವಿ ನಿರ್ಮಿತಮಪ್ಪ ಛಂದೋಂಬುರಾಶಿಯೊಳ್ ಪ್ರಥಮ ಪರಿಚ್ಛೇದಂ ಸಮಾಪ್ತಂ' ಎಂದು ಮುಗಿಯುತ್ತದೆ. ಆದರಲ್ಲಿ ಒಟ್ಟು ೧೭೯ ಪದ್ಯಗಳಿವೆ. ಗ್ರಂಥವು ಹರುಕು ಮುರುಕು ಎಂದು ನೋಡಿದಕೂಡಲೆ ತಿಳಿಯುತ್ತದೆ. (ಇದನ್ನು ಮುಂದೆ ಮದರಾಸ್ ಮುದ್ರಣ, ಅಥವಾ ಮಪ್ರತಿ ಎಂದು ನಿರ್ದೇಶಿಸಿದೆ.)

ಈಚೆಗೆ, ಎಂದರೆ ೧೯೫೦ರಲ್ಲಿ, ವಿದ್ಯಾರತ್ನ ಆರ್. ಎಸ್. ಪಂಚಮುಖಿ ಅವರು ಕನ್ನಡ ಸಂಶೋಧನ ಸಂಸ್ಥೆಯ ಒಂದು ಸಮಗ್ರ ಓಲೆಯ ಹಸ್ತಪ್ರತಿಯಿಂದಲೂ ಇನ್ನೂ ಐದು ಅಸಮಗ್ರ ಪ್ರತಿಗಳ ಸಹಾಯದಿಂದಲೂ ಇದನ್ನು ಸಂಪಾದಿಸಿ ಉಪೋದ್ಘಾತ ಪರಿಶಿಷ್ಟಗಳೊಡನೆ ಪ್ರಕಟಿಸಿದರು. ಈ ಪ್ರತಿಗಳು ಅಷ್ಟು ಶುದ್ಧವಲ್ಲದ್ದರಿಂದಲೂ ಸಂಪಾದಕರು ಅವುಗಳ ಪಾಠವನ್ನು ಹೆಚ್ಚು ತಿದ್ದುವ ಗೋಜಿಗೆ ಹೋಗಿಲ್ಲದ್ದರಿಂದಲೂ, ಇದರಲ್ಲಿಯೂ ಹಲವು ತಪ್ಪುಗಳಿವೆ; ಕೆಲವು ಪದ್ಯಗಳಿಗೆ ಅರ್ಥವೇ ಆಗುವುದಿಲ್ಲ. (ಇದನ್ನು ಮುಂದೆ ಧಾರವಾಡದ ಮುದ್ರಣ ಅಥವಾ ಧಾಪ್ರತಿ ಎಂದು ನಿರ್ದೇಶಿಸಿದೆ.)

ನನಗೆ ದೊರೆತ ಓಲೆಯ ಪ್ರತಿಯಲ್ಲಿ ಮೊದಲು ನನ್ನ ಗಮನವನ್ನು ಸೆಳೆದದ್ದು 'ಶ್ರೀಮದ್ಗಂಗಾ ತರಂಗಾಂಕಿತ........ಕಲ್ಲಿನಾಥಾಖ್ಯ ಲಿಂಗಂ' ಎಂಬ ಅದರ ಮಂಗಳಪದ್ಯ. ಇದು ಓರಿಯಂಟಲ್ ಲೈಬ್ರರಿಯ ಹಸ್ತಪ್ರತಿಯಲ್ಲಿರಲಿಲ್ಲ. ಆದ್ದರಿಂದ ಈ ಗ್ರಂಥವನ್ನು ಏಕೆ ಪ್ರಕಟಿಸಬಾರದೆಂಬ ಯೋಚನೆ ಬಂತು. ಅಲ್ಲಲ್ಲೇ ಅದರ ಹಸ್ತಪ್ರತಿಗಳನ್ನು ವಿಚಾರಿಸಿದೆ. ಎಲ್ಲಿಯೂ ದೊರಕಲಿಲ್ಲ. ನನ್ನ ಹತ್ತಿರವಿದ್ದ ಪ್ರತಿಯು ತಕ್ಕಮಟ್ಟಿಗೆ ಶುದ್ಧವಾಗಿತ್ತೆನಿಸಿದ್ದರಿಂದ, ಅದನ್ನೇ ಶೋಧಿಸಿ ಪ್ರಕಟಿಸಿದರಾಯಿತು; 'ನಿಡುವಣಿ' ಎಲ್ಲಿದೆ, ಅದು ಗ್ರಂಥಕರ್ತನ ಊರಾಗಿರಬಹುದು, ಅದನ್ನಾದರೂ ವಿಚಾರಮಾಡೋಣ—ಎಂದು ಪ್ರಯತ್ನಪಟ್ಟೆ. ನಾನು ವಿಚಾರಮಾಡಿದವರಲ್ಲಿ ರಾವ್‌ಬಹದ್ದೂರ್ ಪಿ. ಜಿ. ಹಳಕಟ್ಟಿಯವರು 'ನಿಡುವಣಿಯೆಂಬುದು ಬಿಜಾಪುರದ ತಾಲ್ಲೂಕಿನಲ್ಲಿ ಒಂದು ದೊಡ್ಡ ಗ್ರಾಮ; ಅದನ್ನು ಈಗ ನಿಡೋಣಿ ಎಂದು ಕರೆಯುತ್ತಾರೆ' ಎಂದು ಮುಂತಾಗಿ ತಿಳಿಸಿದರು.* ಹಾಗೇ ಹಾಸನದ ಡಿಸ್ಟ್ರಿಕ್ಟು ಹೊಳೆನರಸಿಪುರದ ತಾಲ್ಲೂಕು ದೊಡ್ಡಕಾಡನೂರು ಹೋಬಳಿಯಲ್ಲಿ ನಿಡುವಾನಿ ಎಂಬ ಗ್ರಾಮವಿದೆ ಎಂದೂ, ಅಲ್ಲಿ ಒಂದು ಬಸವೇಶ್ವರ ದೇವಸ್ಥಾನವಿದೆಯೆಂದೂ ತಿಳಿಯಿತು. ಹೆಚ್ಚುವಿವರಗಳು ತಿಳಿಯಲಿಲ್ಲ. ನಿಡೋಣಿ, ನಿಡುವಾನಿ ಎರಡೂ ನಿಡುವಣಿಯಾಗಬಹುದು.—ಅಡೋನಿ, ಅದವಾನಿ, ಎಂಬಂತೆ. ಪ್ರಾಯಶಃ ಮೂಲ ಶಬ್ದವು 'ನಿಡಿದಾದ ಓಣಿ' (=ಉದ್ದವಾದ ರಸ್ತೆ) ಎಂಬುದರಿಂದ ಆದದ್ದು. ಅದೇನೇ ಇರಲಿ, ಗ್ರಂಥವು ಅಷ್ಟೇನೂ ಬೆಲೆಯುಳ್ಳದ್ದೆಂದು ತೋರಲಿಲ್ಲವಾಗಿ ಅದರ ಪ್ರಕಟನೆಯನ್ನು ಉದಾಸೀನ ಮಾಡಿದೆ. ಮದರಾಸ್ ಮುದ್ರಣವನ್ನು ನೋಡಿದಮೇಲೆ ಆ ಅಭಿಪ್ರಾಯ ಬಲವಾಯಿತು. ನನ್ನ ಹತ್ತಿರವಿದ್ದ ಹಸ್ತಪ್ರತಿಯನ್ನು ಹೋಲಿಸಿ ನೋಡದ್ದರಿಂದ ಅದರಮೇಲೆ ಔದಾಸೀನ್ಯವೇ ಇತ್ತು. ಆದರೆ ಮೊದಲನೆಯ ವೃತ್ತವನ್ನಾದರೂ ಉಲ್ಲೇಖಿಸಿ ಯಾವುದಾದರೂ ಪತ್ರಿಕೆಯಲ್ಲಿ ಒಂದು ಸಣ್ಣಲೇಖನವನ್ನು ಬರೆಯುಬೇಕೆಂಬ ಯೋಚನೆಯೇನೋ ಇತ್ತು. ಏಕೋ ಅದು ಕಾರ್ಯರೂಪಕ್ಕೆ ಬರಲಿಲ್ಲ.

ಕಳೆದ ವರ್ಷ ಧಾರವಾಡದ ಪ್ರತಿಯನ್ನು ನೋಡಿದಾಗ ಈ ಆದಿಪದ್ಯವನ್ನು ನೋಡಿ, ಅದು ಹೊರಗೆ ಬಂತಲ್ಲಾ ಎಂದು ಸಂತೋಷವಾಯಿತು. ಆ ಗ್ರಂಥವೂ ನನ್ನ ಪ್ರತಿಯಂತೆಯೇ ಇದೆಯೋ ಏನೋ ನೋಡಬೇಕೆಂಬ ಕುತೂಹಲವೂ ಉಂಟಾಯಿತು. ಎರಡನ್ನೂ ಹೋಲಿಸಿ ನೋಡಿದೆ. ನನ್ನ ಹತ್ತಿರವಿದ್ದ ಪ್ರತಿಯು ಇದುವರೆಗೆ ಯಾರಿಗೂ ದೊರೆತಿರಲಿಲ್ಲವೆಂದೂ, ಇದೇ ಎಲ್ಲಕ್ಕಿಂತಲೂ ಹೆಚ್ಚು ಶುದ್ಧಪ್ರತಿಯೆಂದೂ, ಪ್ರಕ್ಷಿಪ್ತಾದಿಗಳಿಲ್ಲದೆ (ಅಥವಾ ತೀರ ಕಡಮೆಯಾಗಿ) ಮೂಲಗ್ರಂಥಕ್ಕೆ ತುಂಬ ಹತ್ತಿರ ಬರುತ್ತದೆಂದೂ ಎನ್ನಿಸಿತು. ಅದನ್ನು ಪ್ರತಿಮಾಡಿ ಮುಪ್ರತಿ ಛಾಪ್ರತಿಗಳಿಂದ ಪಾಠಾಂತರಗಳನ್ನು ಬರೆಯಲು ಹೋದಾಗ ಅದು ಅಸಾಧ್ಯವೆನ್ನಿಸಿತು; ಏಕೆಂದರೆ ಈ ಮೂರಕ್ಕೂ ಅಷ್ಟು ವ್ಯತ್ಯಾಸಗಳು ಕಂಡು

---

* ...."ನಿಡುವಣಿ" is a big village in the Bijapur Taluka, 12 miles distant from Bijapur City. It is called ನಿಡೋಣಿ now by the pople. I have passed many a time by the village, but have not actually gone into the village. I shall inquire about the temple you refer to. If you can inform the particulars about the temple about which you intend to have special information, I shall make detailed local inquiry and inform you .... 8-9-1939.

ಬಂದುವು ; ಅವೆಲ್ಲವನ್ನೂ ಅಲ್ಲಲ್ಲಿಯೇ ತೋರಿಸಿದರೆ, ಮುದ್ರಣದ ಕಷ್ಟವಿರಲಿ, ಓದುವುದೇ ತುಂಬ ಕಷ್ಟವಾಗುವುದೆನ್ನಿಸಿತು. ಹೇಗೂ ಅವೆರಡು ಪ್ರತಿಗಳೂ ಅಚ್ಚಾಗಿ ದೊರೆಯುತ್ತಿದ್ದದ್ದರಿಂದ ಇದನ್ನೂ ಶೋಧಿಸಿ ಮುದ್ರಿಸುವುದೇ ಉತ್ತಮವೆಂದು ತೋರಿತು. (ಇದನ್ನು ಮುಂದೆ ಬೆಂಗಳೂರು ಮುದ್ರಣ ಅಥವಾ ಬೆಂಪ್ರತಿ ಎಂದು ನಿರ್ದೇಶಿಸಿದೆ.)

## ಮೂಲಪಾಠ

ಅನುಬಂಧದಲ್ಲಿ ಕೊಟ್ಟಿರುವ ಹೋಲಿಕೆಯ ಪಟ್ಟಿಯಿಂದ ಈ ಮುದ್ರಣಗಳ ಪದ್ಯಸಂಖ್ಯೆಗಳಲ್ಲಿರುವ ತಾರತಮ್ಯ, ಅವುಗಳ ಸ್ಥಾನ ಇವು ತಿಳಿಯುತ್ತವೆ. ಬೆಂಪ್ರತಿಯಲ್ಲಿರುವ ಒಟ್ಟು ಪದ್ಯ ಸಂಖ್ಯೆ ೪೬+೨೪+೩೬+೨೮=೧೩೪. ಧಾಪ್ರತಿ ಇವುಗಳಲ್ಲಿ ೪೬+೨೪+೩೧+೨೩=೧೨೪ ಪದ್ಯಗಳನ್ನೊಳಗೊಂಡಿದೆ. IIIನೆಯ ಅಧ್ಯಾಯದ ೨೩, ೨೪, ೩೨, ೩೩, ೩೪ ಪದ್ಯಗಳೂ, IVನೆಯ ಅಧ್ಯಾಯದ ೧, ೨, ೩, ೪, ೨೭ ಪದ್ಯಗಳೂ, ಕಡಮೆಯಾಗಿರುವ ಪದ್ಯಗಳು. ಇವುಗಳಲ್ಲಿ III ೨೩, ೨೪ ಪದ್ಯಗಳು ಊರ್ಧ್ವಮುಖದ ಅಧೋಮುಖದ ಪಾರ್ಶ್ವಮುಖದ ವರ್ಣಗಳನ್ನೂ ಅವು ಎಲ್ಲಿ ಶುಭಕರಗಳೆಂಬುದನ್ನೂ ಹೇಳುತ್ತವೆ. ೩೨, ೩೩, ೩೪ ಪದ್ಯಗಳು 'ಪದಕವಿತಾಲಕ್ಷಣ'ವನ್ನು ಹೇಳುತ್ತವೆ. IV ೧-೪ ಪದ್ಯಗಳು ಕನ್ನಡದ ಬಗೆಗಳನ್ನೂ, ೨೭ನೆಯ ಪದ್ಯವು ವಿರಹವನ್ನು ಕೆರಳಿಸುವ ವಸ್ತುಗಳನ್ನೂ ಹೇಳುತ್ತವೆ. ಹೀಗೆ ಬಿಟ್ಟಿರುವ ಈ ಹತ್ತು ಪದ್ಯಗಳೂ ನಾಲ್ಕು ಸ್ವತಂತ್ರ ಅಂಶಗಳನ್ನು ಪ್ರತಿಪಾದಿಸುತ್ತವೆ. ಇವನ್ನು ಬಿಟ್ಟರೆ ವಿಷಯ ಕಡಮೆಯಾಗುತ್ತದೆಯೇ ಹೊರತು ಮಿಕ್ಕ ಗ್ರಂಥ ಹರುಕು ಮುರುಕಾಗುವುದಿಲ್ಲ. ಆದ್ದರಿಂದ ಇವನ್ನು ಬೆಂಪ್ರತಿಯು ಸೇರಿಸಿದ್ದರೂ ಇರಬಹುದು, ಧಾ ಪ್ರತಿಯು ಬಿಟ್ಟಿದ್ದರೂ ಇರಬಹುದು; ವಿವರಣೆಗಾಗಿ ಬೇರೆ ಪದ್ಯಗಳನ್ನು ಬರೆದೂ ಇರಬಹುದು. (ಉದಾಹರಣೆಗೆ, ಬೆಂ IV ೨೭ನ್ನೂ ಧಾ IV ೩೫-೩೯ನ್ನೂ ಹೋಲಿಸಿ.) ಧಾ ಪ್ರತಿಯಲ್ಲಿ ಇನ್ನು ಯಾವ ಯಾವುದೋ ಪದ್ಯಗಳು ಸೇರಿರುವುದನ್ನು ನೋಡಿದರೆ ಈ ಹತ್ತು ಪದ್ಯಗಳನ್ನು ಬಿಟ್ಟಿರುವುದು ಗಮನಾರ್ಹವೆನ್ನಿಸುತ್ತದೆ. ಹಾಗೇ ಬೇರೆಡೆಯ ಪದ್ಯಗಳನ್ನು ಸೇರಿಸದೆ, ಮೂರು ಪ್ರತಿಗಳಲ್ಲಿಯೂ ತೀರ ಕಡಮೆ ಪದ್ಯಸಂಖ್ಯೆಯುಳ್ಳ ಬೆಂಪ್ರತಿಯು ಈ ಹತ್ತನ್ನು ಇಟ್ಟುಕೊಂಡಿರುವುದೂ ಗಮನಾರ್ಹವೇ. ಆದ್ದರಿಂದ ಇವು ಹೊಸದಾಗಿ ಸೇರಿರಲಾರವೆಂದೇ ಎನ್ನಿಸುತ್ತದೆ. ಅಂತು, ಮೂಲಪ್ರತಿಯು ಈ ೧೩೪ ಪದ್ಯಗಳಲ್ಲಿಯೇ ಅಡಗಿರುವುದು ಸಂಭವ.

ಧಾಪ್ರತಿಯಲ್ಲಿ ಒಟ್ಟು (೬೫+೪೩+೪೧+೬೮=) ೨೧೭ ಪದ್ಯಗಳಿವೆ; ಎಂದರೆ ಬೆಂಪ್ರತಿಗಿಂತ ೮೩ ಪದ್ಯಗಳು—ಅಥವಾ ಆದರ ೧೦ನ್ನು ಬಿಟ್ಟರೆ ೯೩ ಪದ್ಯಗಳು—ಹೆಚ್ಚಾದ ಹಾಗಾಯಿತು:—ಇವು I ರಲ್ಲಿ ೨-೭, ೧೧, ೧೨, ೧೪, ೧೬, ೨೪, ೨೬, ೩೦ ೫೦-೫೨, ೬೩-೬೫ (ಒಟ್ಟು ೧೯) ; II ರಲ್ಲಿ ೧-೩, ೧೬-೧೮, ೨೧, ೨೩ ೨೮-೩೫ ೩೭-೪೩ (ಒಟ್ಟು ೨೩) ; III ರಲ್ಲಿ ೧-೩, ೯, ೨೯, ೩೫-೩೮, ೪೧ (ಒಟ್ಟು ೧೦) ; IV ರಲ್ಲಿ ೧-೯, ೧೭, ೨೦, ೨೭, ೩೫-೩೯, ೪೧-೬೮ (ಒಟ್ಟು ೪೫)* ಹೀಗಿವೆ. ಇವುಗಳೊಳಗೆ ಅಧ್ಯಾಯಗಳ ಆದಿಯಲ್ಲಿ ಬರುವವೇ ೨೨ ಪದ್ಯಗಳು. ಇವು ಬಹುಮಟ್ಟಿಗೆ ಪೀಠಿಕಾ ಶ್ಲೋಕ

* ಇವುಗಳನ್ನು ಕೂಡಿದರೆ ೯೭ ಆಗುತ್ತದೆ.

ಗಳ ವಿಸ್ತರಣೆ; ಅಧ್ಯಾಯಗಳ ಅಂತ್ಯದಲ್ಲಿ ಬರುವವು ೪೭. ಧಾ ಪ್ರತಿಯ IV ೪೦ನೆಯ ಪದ್ಯವು ಬೆಂಪ್ರತಿಯಲ್ಲಿ ಅಧ್ಯಾಯಾಂತದ, ಮತ್ತು ಗ್ರಂಥಾಂತದ, ಪದ್ಯ; ಆದ್ದರಿಂದ ಅದರಲ್ಲಿ ಕಾಮಿಕಳೆಗಳು, ಚಂದ್ರಕಳೆಗಳು, ವಿಟರ ಲಕ್ಷಣಗಳು, ವೈರಾಕ್ಷರಗಳ ಕ್ರಮ, ಷಟ್ಪದಿಗಳ ಕ್ರಮ, ಇವುಗಳನ್ನು ತಿಳಿಸುವ ಭಾಗ (೪೧-೬೮) ಪ್ರಕ್ಷಿಪ್ತವಾಗಿರಬೇಕು. ಮಿಕ್ಕವುಗಳಲ್ಲಿ II ೨೭-೪೩ ಈ ಪದ್ಯಗಳು ವಡಿಯ ವಿವರಣೋದಾಹರಣೆಗಳನ್ನು ಕೊಡುತ್ತವೆ. ಬೆಂಪ್ರತಿಯ II ೧೮-೨೩ರಲ್ಲಿ ವಡಿಯ ಪ್ರಸ್ತಾಪವಿದೆ. ಅಲ್ಲಿ ವಿವರಣೆ ಸಾಲದು, ಉದಾಹರಣೆಗಳಿಲ್ಲ, ಎಂದೋ ಏನೋ ಧಾಪ್ರತಿಯ ಮೂಲದಲ್ಲಿ ಮೇಲಣ ೨೭-೪೩ ಪದ್ಯಗಳನ್ನು ಸೇರಿಸಿರಬೇಕು. ವಸ್ತುತಃ ವಿವರಣೆ ಅವಶ್ಯಕವಿಲ್ಲ; ಏಕೆಂದರೆ ಅದು ಸ್ಪಷ್ಟವಾಗಿದೆ; ಮತ್ತು ಲಕ್ಷ್ಯಗಳಿಂದ ಸ್ಪಷ್ಟತರವಾಗಿದೆ. ಕವಿಯು ಲಕ್ಷ್ಯಗಳನ್ನೂ ಲಕ್ಷಣ ಪದ್ಯಗಳಲ್ಲಿಯೇ ಅಡಗಿಸಿರುವಂತಿದೆ. ಏಕೆಂದರೆ ಬೆಂಪ್ರತಿಯ ೧೮-೨೪ ಈ ಪದ್ಯಗಳ ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ವಡಿ ಇದೆ—೧೮. ಕೆ-ಪೇ, ಕ-ಕಾ; ೧೯. ಅ-ಆ, ಪ-ಪ; ೨೦. ನಿ-ನಿ, ತ-ತಾ; ೨೧. ಸ-ಸ, ಬೆ-ಭೇ; ೨೨. ಭಾ-ಭಾ, ಕೇ-ಕಿ; ೨೩. ಸ-ಸ, ಕೆ-ಕೇ; ೨೪. ಸ-ಸ, ಲೊ-ಲೋ. ಇದು ಆಕಸ್ಮಿಕವಾಗಿರಲಾರದು. ಏಕೆಂದರೆ, ಮುಂದೆ ಹುಡುಕಿದರೆ ಅಲ್ಲೊಂದು ಇಲ್ಲೊಂದು ವಡಿ ಪ್ರಯೋಗದಂತಿರುವುದು ಕಂಡರೂ, ಅದು ಹೀಗೆ ಒಂದೇ ಸಮನೆ ಬರುವುದಿಲ್ಲ. ಇಲ್ಲಿ ಗಮನಿಸತಕ್ಕ ಸಂಗತಿಯೇನೆಂದರೆ, ಕಂದದ ಎರಡನೆಯ ಮತ್ತು ನಾಲ್ಕನೆಯ ಸಾಲುಗಳಲ್ಲಿ, ಮೂರನೆಯ ಗಣವಾದಮೇಲೆ, ಯತಿ ಇದೆ—ಎಂಬುದು. ಕನ್ನಡಿಗರು ಯತಿಯನ್ನು ಬಿಟ್ಟರು. ಅದರ ಹಿಂದೆ ವಡಿಯೂ ತಾನಾಗಿಯೇ ಹೋಯಿತು.

ಇದನ್ನು ಪರಿಶೀಲಿಸಿದರೂ, ಹಿಂದೆ ಹೇಳಿದಂತೆ ಬೆಂಪ್ರತಿಯ ೧೩೪ ಪದ್ಯಗಳೇ ಮೂಲ ಗ್ರಂಥವಾಗಿರುವುದು ಸಂಭವ ಎಂದು ತೋರುತ್ತದೆ.

ಇನ್ನು ಮಪ್ರತಿಯನ್ನು ಇವುಗಳೊಡನೆ ಹೋಲಿಸಬೇಕಾದದ್ದಿಲ್ಲ; ಅದರಲ್ಲಿ ಬೆಂಪ್ರತಿಯ I ನೆಯ ಅಧ್ಯಾಯದ ೩೪ ಪದ್ಯಗಳೂ II ನೆಯ ಅಧ್ಯಾಯದ ೧೮ ಪದ್ಯಗಳೂ III ನೆಯ ಅಧ್ಯಾಯದ ೫ ಪದ್ಯಗಳೂ IV ನೆಯ ಅಧ್ಯಾಯದ ೨ ಪದ್ಯಗಳೂ, ಹೀಗೆ ಒಟ್ಟು ೫೯ ಪದ್ಯಗಳು- ಎಂದರೆ I ಮತ್ತು II ನೆಯ ಅಧ್ಯಾಯಗಳ ಹೆಚ್ಚಿನಭಾಗ- ಮಾತ್ರ ದೊರೆಯುತ್ತವೆ. ಅದರಲ್ಲಿ ಅಧ್ಯಾಯವಿಭಾಗವಿಲ್ಲ. ಅದರ ಜೊತೆಗೆ, ಮಿಕ್ಕ ೧೨೦ ಪದ್ಯಗಳಲ್ಲಿ, ಎಲ್ಲೆಲ್ಲಿಂದಲೋ ತಂದು ಸೇರಿಸಿದ ಪದ್ಯಗಳಿವೆ. ಪಾಠ ತೀರ ಅಶುದ್ಧವಾಗಿದೆ.

## ಗ್ರಂಥಪಾಠ

ಬೆಂಪ್ರತಿಯ ಮೂಲವು ಬಹುಮಟ್ಟಿಗೆ ಶುದ್ಧವಾಗಿದೆ. ಅದು ಪ್ರಾಯಶಃ ವ್ಯುತ್ಪನ್ನನಾದವನು ಬರೆದುಕೊಂಡದ್ದು; ಮತ್ತು ಇನ್ನೊಂದು ಪ್ರತಿಯೊಡನೆ ಹೋಲಿಸಿದಂತಿದೆ. '**ಪ್ರತ್ಯಂತರೇ** ಮನ್ಮಥಾಸ್ತ್ರಗಳ್' ಎಂದು ಬರೆದಿರುವುದನ್ನು ನೋಡಿದರೆ ಹೀಗೆ ಊಹಿಸಬೇಕಾಗುವುದು. ಆದರೆ ಹಿಂದಿನ ರೂಢಿಯಂತೆ ಇದರಲ್ಲಿ ಸಂಸ್ಕೃತ ಏತ್ವ ಓತ್ವಗಳು ಬಂದಾಗ ಸಾಧಾರಣವಾಗಿ ದೀರ್ಘವನ್ನು ಸೂಚಿಸುವುದಿಲ್ಲ- ಎಕಾಂಬಕ, ಮೆಷ, ಎಣ, ಇತ್ಯಾದಿ; ಅದರ ಅನುಕರಣದಮೇಲೆ ಕೆಲವು ಕನ್ನಡಪದಗಳ ದೀರ್ಘವೂ ಸೂಚಿತವಾಗಿಲ್ಲ- ಸೊಲ್ತು, ಸೊಲ್ವುದು, ಇತ್ಯಾದಿ. 'ಸಿ'ಗೆ ಬದಲಾಗಿ 'ಶಿ' ಬರುತ್ತದೆ- ರಶಿಕ, ಅಶಿತ, ನಾಶಿಕಾ, ಶಿತವರ್ಣಂ, ವಿಕಶಿತ, ಇತ್ಯಾದಿ; ಹಾಗೇ 'ಶಿಕ್ಷಿತ' ಎಂಬುದು 'ಸಿಕ್ಷಿತ' ಎಂದಿದೆ.

ನಂಮೊಳ್, ಕಂನಡ, ವಂಣಂ ಮುಂತಾದ ಕಡೆಗಳಲ್ಲಿ ಅನುಸ್ವಾರವಿದೆ; ಈಗ ದ್ವಿತ್ವವನ್ನು ಉಪಯೋಗಿಸುವುದು ರೂಢಿ. ಮುಂತ್ತೆ, ದುಃಖ್ಖ, ಅಂತ್ತ್ಯ, ಸಂತ್ತೋಷಂ, ಅಂತ್ತರ, ಉಗ್ಗ್ರ, ದಂತ್ತ, ರುದ್ದ್ರ, ಎಂಬೆಡೆಗಳಲ್ಲಿ ಒತ್ತುಗಳಿವೆ. ಈಗ ಒತ್ತಿಲ್ಲದೆ ಬರೆಯುತ್ತೇವೆ. ಪಾದಾದಿಯಲ್ಲಿ ಇ, ಎ, ಒಗಳಿಗೆ ಬದಲಾಗಿ ವ್ಯಂಜನವಿದೆ—ಯಿನವಾರಂ, ಯಿಂದು, ಯಿಪ್ಪತ್ತು, ಯೆಂದುಂ, ಯಸೆವಾ, ವದವಿದ, ವೊಪ್ಪುವ, ವೊಳುಗನ್ನಡ, ಇತ್ಯಾದಿ. ಉಸುರ್ದಂ, ಉಸುರ್ದೊಡೆ (ಉಸುರ್ದಡೆ ಎಂದೂ ಇದೆ.) ಇಟ್ಟಡೆ, ಜಗಣಮು, ಅಕ್ಕು, ಆವಗ, ತುಱುಗಿರ್ಕು, ಅನಲು, ಮುಂತಾದ ನಡುಗನ್ನಡ ರೂಪಗಳಿವೆ. ಪುನುರ್ವಸು, ದುಃಫಲ, ಕ್ರುತಿ, ಕೃತಿ, ಸೊಗಇಪ, ವನ್ನ್ಹಿ, ಎಂಬ ಅಶುದ್ಧರೂಪಗಳಿವೆ. ಱ ಮತ್ತು ೞ ಇವುಗಳ ಪ್ರಯೋಗವಿಲ್ಲ. I ೪ರಲ್ಲಿ 'ಸರ್ವಜುೀ' ಎಂದೂ IV ೨೪ರಲ್ಲಿ 'ತುಱುಗಿರ್ಕು' ಎಂದೂ (ಪ್ರಾಸಸ್ಥಾನದಲ್ಲಿ) ಅಶುದ್ಧ ಪ್ರಯೋಗವಿದೆ. ಆದ್ದರಿಂದ ಕವಿಯು ಈ ಅಕ್ಷರವನ್ನು ಪ್ರಯೋಗಿಸಿಲ್ಲವೆಂದೇ ಹೇಳಬೇಕು. ಒಂದೆರಡುಕಡೆ ೪ ಮಾತ್ರೆಗಳ ಎರಡು ಗಣಗಳಿಗೆ ಬದಲಾಗಿ ೩ ಮಾತ್ರೆಯ ಒಂದು ಗಣ, ೫ ಮಾತ್ರೆಯ ಒಂದು ಗಣ, ಹೀಗೆ ಬಂದಿದೆ (ಆಶ್ವಾಸ ೪–೬, ೮, ೯.) ಎರಡನೆಯ ಪಾದದ ಕೊನೆಯ ಗಣ ಲಘುವಿನಿಂದ ಮುಗಿಯುವುದೂ ಉಂಟು (೪–೧೨.) ಇವು ನಡುಗನ್ನಡದಲ್ಲಿ ಅಲ್ಲಲ್ಲೇ ಕಂಡುಬರುವುದರಿಂದ ಇವನ್ನು ಉಳಿಸಿಕೊಂಡಿದೆ. II ೯ರಲ್ಲಿ ಅಜಪ್ರಾಸಕ್ಕೆ ಉದಾಹರಣೆ ಕೊಡುತ್ತ ಪ್ರಾಸಸ್ಥಾನದಲ್ಲಿ ವಿಸರ್ಗಸಹಿತವಾದ ಅಕ್ಷರವನ್ನು ಪ್ರಯೋಗಿಸಿದ್ದಾನೆ. ಇದು ಸಂಸ್ಕೃತ ವ್ಯಾಕರಣದ ಸಂಧಿ ನಿಯಮಗಳಿಗೆ ವಿರುದ್ಧವಾಗಿದೆ. ಆದರೂ ಅದನ್ನು ಹಾಗೇ ಉಳಿಸಿಕೊಂಡಿದೆ. ಮಿಕ್ಕಕಡೆ ಅಸ್ಪಷ್ಟವಾಗಿದ್ದಾಗ, ಅರ್ಥವಾಗದಿದ್ದಾಗ, ತಪ್ಪಿದ್ದಾಗ, ಧಾ ಮ ಪ್ರತಿಗಳನ್ನೂ ಪಾಠಾಂತರಗಳನ್ನೂ ನೋಡಿ ತಿದ್ದಿದೆ. ಆದರೆ ಹೆಚ್ಚು ತಿದ್ದುವ ಗೋಜಿಗೆ ಹೋಗಿಲ್ಲ. ಇಷ್ಟಾದರೂ ಕೆಲವು ಕಡೆ ಇನ್ನೂ ಸರಿಯಾಗಿ ಅರ್ಥವಾಗುವುದಿಲ್ಲ. ಬೇರೆ ಹಸ್ತಪ್ರತಿಗಳು ಸಿಕ್ಕಿದರೆ ಅವುಗಳನ್ನು ಉಪಯೋಗಿಸಿ ಇನ್ನೂ ಪರಿಷ್ಕರಿಸುವುದಕ್ಕೆ ಅವಕಾಶವಿದೆ ಎನ್ನಿಸುತ್ತದೆ.

## ಕವಿ

ಕವಿಯು ಹೆಸರು I ೨ರಲ್ಲಿ 'ಈಶಕವೀಶಂ' ಎಂದಿದೆ. ಅದರಿಂದ ಅವನ ಹೆಸರು 'ಈಶ್ವರ' ಎಂದು ಊಹಿಸಬಹುದು. ಮಿಕ್ಕ ಕೆಲವು ಕಡೆಗಳಲ್ಲಿಯೂ ಅಧ್ಯಾಯಾಂತ್ಯಗಳಲ್ಲಿಯೂ 'ಅಭಿನವ ಕೇಶಿರಾಜ' ಎಂದು ಬರುತ್ತದೆ. ಅದು ಅವನ ಬಿರುದಿರಬೇಕು. ಕೇಶಿರಾಜನು ೧೩ನೆಯ ಶತಮಾನದ ಮಧ್ಯಭಾಗದಲ್ಲಿ ಶಬ್ದಮಣಿದರ್ಪಣವನ್ನು ಬರೆದನು. ಅವನು ಛಂದೋಗ್ರಂಥವನ್ನೇನೂ ಬರೆದಂತೆ ತಿಳಿದಿಲ್ಲ. ಆದರೂ 'ಲಕ್ಷಣ ಶಿಕ್ಷಾಚಾರ್ಯ ಸುಲಕ್ಷಣಿ' ಎಂದು ಅವನಲ್ಲಿ ಕವಿಯು ಗೌರವವಿಟ್ಟುಕೊಂಡಿದ್ದಂತೆ ಕಾಣುತ್ತದೆ. ತನಗಿಂತ ಸುಮಾರು ೫೦೦–೬೦೦ ವರ್ಷಗಳ ಹಿಂದೇ 'ಛಂದೋಂಬುಧಿ'ಯನ್ನು ಬರೆದ ನಾಗವರ್ಮನನ್ನೇ ಹೆಸರಿಸಿಲ್ಲ; ಆ ಗ್ರಂಥವನ್ನೇ ಇವನು ಕಂಡಿದ್ದನೋ ಇಲ್ಲವೋ ಎಂಬ ಸಂದೇಹವಾಗುತ್ತದೆ. ಅದು ಹಿಂದಿನ ಕಾಲಕ್ಕೆ ಇದ್ದ ಒಂದೇ ದೊಡ್ಡ ಛಂದೋಗ್ರಂಥವಾದರೂ ಸಾರ್ವತ್ರಿಕವಾಗಿ ರೂಢಿಯಲ್ಲಿದ್ದಂತೆ ಕಾಣುವುದಿಲ್ಲ; ಆದ್ದರಿಂದಲೇ ಶಬ್ದಮಣಿದರ್ಪಣದಂತೆ ಅದರ ಹಸ್ತಪ್ರತಿಗಳು ಹೆಚ್ಚಾಗಿ ದೊರಕುವುದಿಲ್ಲ; ಇಂದಿಗೂ ಅದರ ಶುದ್ಧ ಪಾಠ ದುರ್ಲಭ

ವಾಗಿದೆ. ನಾಗವರ್ಮ, ಫಣಿವರ್ಮ ಎಂಬ ಹೆಸರುಗಳು ಛಂದಸ್ಸಿನ ಕರ್ತನದೆಂದು ಪ್ರಸಿದ್ಧವಾಗಿದ್ದು, ಜನರು ಯಾವ ಛಂದೋಗ್ರಂಥ ದೊರಕಿದರೂ ಅದು ನಾಗವರ್ಮನ ದೆಂದು ಊಹಿಸುವುದು ಸಾಧಾರಣವಾಗಿತ್ತೆಂದು ತೋರುತ್ತದೆ. ಆದ್ದರಿಂದಲೇ ಫಣಿವರ್ಮ ಎಂಬ ಹೆಸರು ಕೆಲವು ತ್ರುಟಿತಪ್ರತಿಗಳಲ್ಲಿರಬಹುದು. ಬಾಣಕವಿ ಯಾರೋ, ಅವನು ಏನು ಬರೆದಿದ್ದಾನೋ ತಿಳಿಯದು. (ಅವನು ಸಂಸ್ಕೃತ ಕಾದಂಬರೀಕಾರನಲ್ಲ.) ಹೀಗೆ ಈಶ್ವರಕವಿಗೆ ಫಣಿವರ್ಮ, ಬಾಣ, ಎಂಬ ಬಿರುದುಗಳಾಗಲಿ ಬೇರೆ ಹೆಸರುಗಳಾಗಲಿ ಇದ್ದಿರಲಾರವು. ಬೆಂಪ್ರತಿಯಲ್ಲಿ ಅವುಗಳ ಸೊಲ್ಲೇ ಇಲ್ಲ.

ಕಿಟ್ಟೆಲರೂ, ಅವರನ್ನು ಅನುವಾದಿಸಿ ರಾ॥ ನರಸಿಂಹಾಚಾರ್ಯರೂ, 'ಇವನ ತಂದೆ ಕಚ್ಚುಟೀಶ'ನೆಂದು ಹೇಳುತ್ತಾರೆ. ಕಿಟ್ಟೆಲರಿಗೆ ಸಿಕ್ಕಿದ ಹಸ್ತಪ್ರತಿಯಲ್ಲಿ ಇದಕ್ಕೆ ಏನು ಆಧಾರ ದೊರೆತಿತ್ತೋ ಗೊತ್ತಿಲ್ಲ. ಧಾಪ್ರತಿಯಲ್ಲಿ (vii) ಕಛಪೇಶನೆಂದಿದೆ. ಇದಕ್ಕೆ ಆಧಾರ 'ಚ' ಪ್ರತಿಯ ೭ನೆಯ ಪದ್ಯ. ಇದರಲ್ಲಿ ಬಗೆಬಗೆಯ ತಪ್ಪುಗಳಿವೆ. ಇದನ್ನು ಕವಿಯು ಬರೆದಿರಲಾರನು. ಇನ್ನಾರು ಬರೆದು ಸೇರಿಸಿದರೋ ತಿಳಿಯದು. ಧಾಪ್ರತಿಗೆ ಆಧಾರವಾದ ಆರು ಹಸ್ತಪ್ರತಿಗಳಲ್ಲಿ ಇದೊಂದರೊಳಗೇ ಈ ಪದ್ಯವಿರುವುದು. ಪ್ರಾಯಶಃ ಇದೇ ಕಿಟ್ಟೆಲರಿಗೂ ಆಧಾರವಾಗಿದ್ದಿರಬಹುದು. ಇದನ್ನು ನಂಬಿ ಈಶ್ವರ ಕವಿಯ ತಂದೆ ಕಛಪೇಶನೆಂದು ಹೇಗೆ ಹೇಳುವುದು? ಇದು 'ಕಚಟಸ್ವರ ವಿಪ್ರಕುಲಂ' ಎಂಬ ಪದ್ಯದ (III ೨) ಮೊದಲ ಪಾದವನ್ನು ತಪ್ಪಾಗಿ ಓದಿ ತಿಳಿದುಕೊಂಡು ಉಂಟಾದ ಭ್ರಾಂತಿ ಎಂದು ತೋರುತ್ತದೆ. ಮೊದಲು 'ಕಚಟೇಸ್ವರ ವಿಪ್ರಕುಲಂ' ಎಂದು ಓದಿ, ಕಟೀಶ್ವರನೆಂಬ ಬ್ರಾಹ್ಮಣನ ಕುಲದಲ್ಲಿ ಹುಟ್ಟಿದವನು ಎಂದುಕೊಂಡಿರಬೇಕು. ಆಮೇಲೆ ಕಚಟೇಶ್ವರಕ್ಕೆ ಅರ್ಥವಿಲ್ಲ, ಕಛಪೇಶ್ವರವಾದರೆ ಅರ್ಥವಾಗುತ್ತದೆ (ಕಚ್ಛಪ = ಆಮೆ) ಎಂದು ಹೀಗೆ ತಿದ್ದಿಕೊಂಡಿರಬೇಕು—ಎಂದು ನನಗೆ ಎನ್ನಿಸುತ್ತದೆ.

## ಕಾಲ

ಕೇಶಿರಾಜನ (ಅಥವಾ ಕೇಶವನ) ಕಾಲ ಸು. ೧೨೫೦. ಆದ್ದರಿಂದ ಅಭಿನವ ಕೇಶಿ ರಾಜನಾದ ಈಶ್ವರನ ಕಾಲ ಅಲ್ಲಿಂದ ಈಚೆಗೆ ಎಂಬುದು ಸ್ಪಷ್ಟವಾಗಿದೆ; ಎಷ್ಟು ಈಚೆಗೆ ಎಂದು ಹೇಳುವುದು ಸಾಧ್ಯವಿಲ್ಲ; ಅವನು ಬಿಳಿಗಿ ಅರಸರ ವಂಶಾವಳಿಯನ್ನು ಬರೆದನೆಂದು ಹೇಳಲು ಆಧಾರವಿಲ್ಲ. ಆದ್ದರಿಂದ ರಾ॥ ನರಸಿಂಹಾಚಾರ್ಯರ ಊಹೆಯಂತೆ ಸುಮಾರು ಕ್ರಿ.ಶ. ೧೫೦೦ ಎಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು.

## ಮತ

ಈಶ್ವರಕವಿಯು ಶಿವಭಕ್ತನೆಂಬುದು ಆದಿ ವೃತ್ತದಿಂದಲೂ, ಮಧ್ಯೆ ಮಧ್ಯೆ ಬರುವ ಶಿವ ವಿಷಯಕವಾದ ಪದ್ಯಗಳಿಂದಲೂ ಸ್ಪಷ್ಟವಾಗುತ್ತದೆ. ಆದರೆ ಅವನು ವೀರಶೈವನೋ ಶೈವ ಬ್ರಾಹ್ಮಣನೋ ನಿರ್ಧರಿಸುವುದಕ್ಕೆ ಸಾಕಾದಷ್ಟು ಆಧಾರವಿಲ್ಲ.

## ಭೀಮಣ

ಈ ಗ್ರಂಥದ II ೨೦ನೆಯ ಪದ್ಯದಲ್ಲಿ ಒಬ್ಬ 'ಭೀಮಣ'ನ ಹೆಸರು ಬಂದಿದೆ. ಇವನು ಕೇಶಿರಾಜನು ಧಾತುಪಾಠದ ಆದಿಯಲ್ಲಿ ಹೇಳಿರುವ ಭೀಮನಲ್ಲವೆಂಬುದು ಸ್ಪಷ್ಟವಾಗಿದೆ.

ಭೀಮನು ವೈಯಾಕರಣ ('ಸಂಭಾವನೆ' ಪುಟ ೧೮೩–೧೯೧); ಅವನು ಛಂದೋವಿಚಾರವನ್ನು ಪ್ರತಿಪಾದಿಸಿದಂತೆ ತಿಳಿದು ಬಂದಿಲ್ಲ. 'ಭೀಮಣ'ನು ವಡಿಪ್ರಯೋಗವನ್ನು ಕುರಿತು ಹೇಳಿದವನು. 'ಭೀಮಣ' (= ಭೀಮಣ್ಣ) ಎಂಬ ಶಬ್ದರೂಪವನ್ನು ನೋಡಿದರೂ, ವಡಿಯು ತೆಲುಗಿನಲ್ಲಿಯೇ ಹೆಚ್ಚು ರೂಢವಾಗಿರುವುದನ್ನು ನೋಡಿದರೂ, ಅವನು ಆಂಧ್ರನಿರಬೇಕೆಂದು ಗೊತ್ತಾಗುತ್ತದೆ. ತೆಲುಗಿನಲ್ಲಿ ವೇಮುಲವಾಡ ಭೀಮಕವಿ ಎಂಬ ಒಬ್ಬ ಗ್ರಂಥಕರ್ತನಿದ್ದಾನೆ. ಛಂದೋಗ್ರಂಥವಾದ 'ಕವಿಜನಾಶ್ರಯಮು' ಅವನ ಕೃತಿಯಾಗಿರಬೇಕೆಂದು ಊಹಿಸಲ್ಪಟ್ಟಿದೆ. ಗ್ರಂಥದಲ್ಲಿ ಕರ್ತೃವು 'ಮಲ್ಲಿಯ ರೇಚ'ನೆಂದು ಹೇಳಿದೆ. ಆದರೆ ಜನಜನಿತವಾದ ಪ್ರತೀತಿಯೇನೋ ಭೀಮಕವಿಯೇ ಕರ್ತೃವೆಂಬುದು. ಅವನ ಕಾಲವು ಕ್ರಿ. ಶ. ೧೧ನೆಯ ಶತಮಾನದ ಕೊನೆ ಅಥವಾ ೧೨ನೆಯ ಶತಮಾನದ ಆದಿ (?). (ಜಯಂತಿ ರಾಮಯ್ಯ ಪಂತುಲು ಅವರ ಪೀಠಿಕೆಯನ್ನು ನೋಡಿ: ಕವಿಜನಾಶ್ರಯದ ದ್ವಿತೀಯ ಮುದ್ರಣ ೧೯೩೨, ಆಂಧ್ರ ಸಾಹಿತ್ಯ ಪರಿಷತ್ತಿನ ಪ್ರಕಟನೆ ೩. A History of Telugu Literature by P. Chenchiah. p. 58.) ಕವಿಜನಾಶ್ರಯವು ತೆಲುಗಿನಲ್ಲಿರುವ ಪ್ರಾಚೀನತಮವಾದ ಛಂದೋಗ್ರಂಥ. ಇದನ್ನು ಈಶ್ವರಕವಿಯು ನೋಡಿರಬಹುದು. 'ಭೀಮಣ ಮುಖ್ಯರ್' ಎಂದಿರುವುದರಿಂದ ಅಪ್ಪಕವೀಯಮು ಮುಂತಾದ ಗ್ರಂಥಗಳನ್ನೂ ನೋಡಿರಬಹುದು. ಆದರೆ ಅಪ್ಪಕವೀಯವನ್ನು (ಕ್ರಿ. ಶ. ೧೬೫೬) ನೋಡಿ ಅದನ್ನೇ ಅನುಸರಿಸಿದನೆಂದೂ ಆದ್ದರಿಂದ ಅವನ ಅನಂತರವೇ ಇದ್ದಿರಬೇಕೆಂದೂ ಹೇಳಬೇಕಾಗಿಲ್ಲ. ಈ ಸಂದರ್ಭದಲ್ಲಿ ಈಶ್ವರಕವಿಯ ಹೇಳಿಕೆ ಕವಿಜನಾಶ್ರಯದ ಕರ್ತೃವು ಭೀಮಕವಿಯೇ ಇರಬೇಕೆಂಬ ಜನಪ್ರತೀತಿಗೆ ಬೆಂಬಲವನ್ನು ಕೊಟ್ಟಂತಾಗುತ್ತದೆ. ಏಕೆಂದರೆ, 'ಭೀಮಣ'ನ ಹೆಸರಿನಲ್ಲಿ ಮತ್ತಾವ ಛಂದೋಗ್ರಂಥವೂ ಇಲ್ಲ.

## ವಡಿ

'ವಡಿ'ಯ ಲಕ್ಷಣವನ್ನು II ೧೯ ರಲ್ಲಿ ಹೀಗೆ ಹೇಳಿದೆ :—

ಪದಪದ್ಯದ ಮೊದಲಕ್ಕರ
ವದು ತಪ್ಪದೆ ನಡುವೆ ಯತಿ ವಿಲಾಸದೊಳಿಡಲುಂ ।
ವಿದಿತದೆ ವಡಿಯಪ್ಪುದು ಮೃದು
ಪದಯುಗೆ ನಿರ್ಮಲಸುಚಿತ್ತೆ ಪರಹಿತಚರಿತೇ ॥

ಪಾದಾದಿಯಲ್ಲಿ ಬಂದ ಅಕ್ಷರವು (ಅಥವಾ ಅದರ ಸವರ್ಣವು) ಯತಿಸ್ಥಾನದಲ್ಲಿಯು ಬಂದರೆ ಅದಕ್ಕೆ ವಡಿ ಎಂದು ಹೆಸರು. ಅದು ಯತಿಯೇ ಅಲ್ಲ; ಯತಿ ಎಂದ

---

In Telugu......the internal Yati indicates the recurrence of the initial syllable of the line or its equivalent rather than the breaking off of a word. In its essence Telugu Yati is more akin to alliteration than to caesura. Sometimes the two ideas are combined.

ತೆಲುಗುಲೋ ವಳಿಯನಗಾ ಪಾದಾದ್ಯಕ್ಷರ ಮುನಕು ಸವರ್ಣಮ್ಮೈನ ಯುಕ್ತರಮೂ ವಚ್ಚುಟಯೇ – ಕವಿಜನಾಶ್ರಯದ Preface page 11 ಮತ್ತು ಪೀಠಿಕೆ ಪುಟ ೨೯.

ವಿರಾಮಸ್ಥಾನ. ಆದ್ದರಿಂದ ಅದನ್ನು ಯತಿ ಅಥವಾ ಯತಿವಿಶೇಷ ಎನ್ನುವುದಕ್ಕಿಂತ ಪ್ರಾಸವಿಶೇಷ ಎನ್ನುವುದು ಸರಿಯಾಗುತ್ತದೆ. ಮೊದಲ ಪಾದದ ಎರಡನೆಯ ಅಕ್ಷರವು ಮುಂದಿನ ಪಾದಗಳಲ್ಲೆಲ್ಲಾ ಎರಡನೆಯ ಅಕ್ಷರವಾಗಿ ಬಂದರೆ ಅದು ಪ್ರಾಸ. ಮೊದಲನೆಯ ಅಕ್ಷರ (ಅಥವಾ ಸಮಾನಾಕ್ಷರ) ಅದೇ ಪಾದದಲ್ಲಿ ಯತಿಯನಂತರ ಬಂದರೆ ಅದು 'ವಡಿ'. ಇದರ ಅನುಸರಣೆಯಿಂದ ಪದ್ಯವು ಹೆಚ್ಚು ಶ್ರಾವ್ಯವಾಗುತ್ತದೆ; ಆದ್ದರಿಂದ ಇದೂ ಒಂದು ವಿಧವಾದ ಶಬ್ದಾಲಂಕಾರವೆನ್ನಬಹುದು.

ಈ ಶಬ್ದದ ನಿರುಕ್ತಿ ಏನೋ ಗೊತ್ತಿಲ್ಲ. ಪುನರಾವೃತ್ತಿ ಎಂಬ ಅರ್ಥವಿರುವುದರಿಂದ ಇದು ಕನ್ನಡದ ಮಡಿ ಎಂಬ ಪದಕ್ಕೆ (ಅಥವಾ ಪ್ರತ್ಯಯಕ್ಕೆ) ಸಂಬಂಧಿಸಿದ್ದರೂ ಇರಬಹುದು. ಇದು ನಾಲ್ವಡಿ ಐವಡಿ ಎಂದು ಮುಂತಾದ ಕಡೆಗಳಲ್ಲಿ 'ವಡಿ' ಎಂಬ ರೂಪವನ್ನೇ ತಾಳುತ್ತದೆ. ಇದಲ್ಲದೆ 'ವಿಚ್ಛೇದ' ಎಂಬ ಅರ್ಥವುಳ್ಳ ಉಡಿ, ಉಡೈ, ಒಡೆ ಎಂಬ ಕನ್ನಡ ತಮಿಳು ಶಬ್ದಗಳಿವೆ. ವಡಿಯು ಇವಕ್ಕೆ ಸಂಬಂಧಪಟ್ಟಿದೆಯೋ ಎಂಬುದನ್ನು ನೋಡಬೇಕು. ಇದು ಸಂಸ್ಕೃತಜನ್ಯವೇ ಎಂಬ ಚರ್ಚೆಯನ್ನು ಮುಪ್ರತಿಯ ಪೀಠಿಕೆಯಲ್ಲಿ (೪೩–೪೭) ನೋಡಬಹುದು.

## ಪದ ಪದ್ಯ ಪಾದ

ಈ ಗ್ರಂಥಕರ್ತನು 'ಪದ' ಎಂಬ ಶಬ್ದವನ್ನು 'ಪದ್ಯಕಾವ್ಯ' ಅಥವಾ ಈಗ ನಾವು ವ್ಯವಹರಿಸುವಂತೆ ಬಿಡಿ 'ಪದ್ಯ' ಎಂಬ ಅರ್ಥದಲ್ಲಿ ಉಪಯೋಗಿಸುತ್ತಾನೆ. ಅದು ಸ್ವತಂತ್ರವಾಗಿಯೇ ಆಗಲಿ (ಉದಾ: ಪದ ಕವಿಯಂ ೧–೫, ಪದಕರ್ತರಿಗೆ ೧–೩೫, ಪದದ ಮೊದಲೊಳ್ ೩–೩೨) 'ಪದ್ಯ'ವೆಂಬ ಶಬ್ದದೊಡನೆ ಸೇರಿಯಾಗಲಿ (ಉದಾ: ಪದ ಪದ್ಯಗಳೊಳ್ ೧–೨೭, ೩೨, ೩೭, ೨–೧, ಪದಪದ್ಯಕ್ಕೆ ೧–೨೮, ೩–೧೯, ಪದಪದ್ಯದ ೨–೯, ೧೯, ಪದಪದ್ಯದೆ ೩–೩೬) ಇರಬಹುದು. ನಾಂದೀಪದ (೩–೩೧) ಪಲ್ಲವಿ ಪದ (೩–೩೩) ಎಂದು ಇತರ ಪದಗಳೊಡನೆ ಸೇರಿಬಂದಿರುವುದೂ ಉಂಟು. ಪದ್ಯಪದಕೆ (೩–೧) ಎಂದು ಹಿಂದುಮುಂದಾಗಿ ಬಂದಿರುವುದೂ ಉಂಟು. ಸೀಸಕ್ಕಂ ಪದಗಳ್ಗಂ (೨–೨೨) ಎಂಬ ಪ್ರಯೋಗವನ್ನು ನೋಡಿದರೆ, ಅದರಲ್ಲಿ ಸೀಸಪದ್ಯ ಸೇರುವುದಿಲ್ಲವೆಂದು ತೋರುತ್ತದೆ. ನಾಗವರ್ಮನು ತನ್ನ ಕಾವ್ಯಾವಲೋಕನದಲ್ಲಿ ಪದವೆಂದರೆ ಕಂದ ಅಥವಾ ವೃತ್ತವೆಂದು ಹೇಳಿದ್ದಾನೆ. (ಸೂತ್ರ ೨೪೧). ಬಹುಶಃ ಅಲ್ಲಿ ಅಂಥ ಬಿಡಿಪದ್ಯ ಎಂದು ಅರ್ಥ. ಇದರೊಡನೆ ನೃಪತುಂಗನ ಕವಿರಾಜಮಾರ್ಗದ ಪದಪದ್ಧತಿಯೊಳ್ (೧–೧೯, ೨೪) ವೃತ್ತ ಜಾತಿ ಪದ ಪದ್ಧತಿಯೊಳ್ (೧–೭೦,) ಪದ ಪದ್ಧತಿಗೆ (೧–೮೩) ಎಂಬ ಪ್ರಯೋಗಗಳನ್ನು ಹೋಲಿಸಬಹುದು. ಪದವೆಂಬುದು ಪದ್ಯ (ಅಥವಾ ಹಾಡು) ಎಂಬ ಅರ್ಥದಲ್ಲಿ ಈಗಲೂ 'ದಾಸರ ಪದಗಳು', 'ಕ್ಷೇತ್ರಯ್ಯನ ಪದಗಳು', 'ಸರ್ವಜ್ಞನ ಪದಗಳು' ಎಂಬಲ್ಲಿ ರೂಢಿಯಾಗಿದೆ. ಆದ್ದರಿಂದ ಹಿಂದೆ ಪದ್ಯ ಗದ್ಯ ಎಂಬ ಮಾತುಗಳನ್ನು ಇಂಗ್ಲಿಷಿನ Poetry, Prose ಎಂಬಂತೆ ಸಾಹಿತ್ಯ ರೂಪಭೇದವನ್ನು ನಿರ್ದೇಶಿಸಲು ಉಪಯೋಗಿಸುತ್ತಿದ್ದರೆಂದೂ ಪದವೆಂಬುದನ್ನು ಬಿಡಿಪದ್ಯ (verse, stanza) ಎಂಬ ಅರ್ಥದಲ್ಲಿ ಉಪಯೋಗಿಸುತ್ತಿದ್ದರೆಂದೂ ಸಾಮಾನ್ಯವಾಗಿ ಹೇಳಬಹುದು.

ಪದವೆಂಬುದಕ್ಕೆ ಎರಡನೆಯದಾಗಿ ಸಾಲು ಅಥವಾ ಪಾದ ಎಂಬ ಅರ್ಥವೂ ಇದೆ: ಕಂದದ ಮೊದಲ ಪದಕ್ಕಂ', 'ಎರಡನೆಯ ಪದಕ್ಕೆ' (೨-೩೩) ಎಂಬ ಪ್ರಯೋಗವನ್ನು ನೋಡಿ. ಅದೇ ಅರ್ಥದಲ್ಲಿ ಪಾದ ಎಂಬುದರ ಪ್ರಯೋಗವೂ ಇದೆ.—'ನಾಲ್ಕುಂ ಪಾದಕ್ಕು ದಯಿಸುಗುಂ' (೨-೧). ಕವಿರಾಜಮಾರ್ಗದ ೧-೨೫, ೩೦ ಈ ಪದ್ಯಗಳಲ್ಲಿ ಬರುವ ಪದ ಪಾದವಿಯು(ದಿ ?)ತನಿಯಮ, ಪದವಿದಿತ ಪಾದನಿಯಮ, ಎಂಬೆಡೆಗಳಲ್ಲಿಯೂ ಪದ ವೆಂದರೆ ಬಿಡಿಪದ್ಯ ಅಥವಾ ವೃತ್ತ, ಪಾದವೆಂದರೆ ಸಾಲು ಎಂದರ್ಥ. ಕವಿರಾಜಮಾರ್ಗ ದಲ್ಲಿಯೂ ಇತರ ಕಡೆಗಳಲ್ಲಿಯೂ ಪದಶಬ್ದಕ್ಕೆ, ಮಾತು, ಹದ, ಅಥವಾ ಔಚಿತ್ಯ ಎಂಬ ಅರ್ಥವೂ ಇದೆ. ಆದರೆ ಅದು ಇಲ್ಲಿ ಪ್ರಕೃತವಲ್ಲ.

## ಗ್ರಂಥಸ್ವರೂಪ, ಪ್ರಯೋಜನ

ಈ ಗ್ರಂಥಕರ್ತನು ತನ್ನನ್ನು 'ಕವೀಶಂ' ಎಂದು ಹೇಳಿಕೊಂಡಿದ್ದಾನೆ. ಮೊದಲನೆಯ ಮತ್ತು ಮೂರನೆಯ ಆಶ್ವಾಸದ ಕೊನೆಯಲ್ಲಿ ಇದನ್ನು 'ಕಾವ್ಯ'ವೆಂದು ನಿರ್ದೇಶಿಸಿದೆ. 'ಕವಿ' ಎಂದರೆ 'ಪಂಡಿತ'ನೆಂದೂ ಅರ್ಥ; ಆ ಅರ್ಥದಲ್ಲಿ ಇವನು ಕವಿಯೇ ಹೊರತು, ಇಲ್ಲಿ 'ರಮಣೀಯಾರ್ಥ ಪ್ರತಿಪಾದನೆ'ಯಾಗಲಿ, 'ರಸಾತ್ಮಕವಾದ ವಾಕ್ಯ'ವಾಗಲಿ ಇಲ್ಲ. ಕನ್ನಡಿಗರಿಗೆ ಇದರ ಮುಖ್ಯ ಪ್ರಯೋಜನವೆಂದರೆ ಪದ್ಯದ ಸ್ವರೂಪ, ವರ್ಣಗಳ ಮತ್ತು ಗಣಗಳ ಶುಭಾಶುಭ ಲಕ್ಷಣಗಳು ಮತ್ತು ಪ್ರಯೋಗಗಳು ಇವುಗಳ ಜ್ಞಾನ. ಇಂದು ನಮಗೆ ಅಮೃತಗಣ ವಿಷಗಣಗಳಲ್ಲಿ ನಂಬಿಕೆ ಇಲ್ಲದಿರಬಹುದು; ಹಿಂದಿನ ಕಾಲದಲ್ಲಿ ಇತ್ತು; ಅದನ್ನು ಇವನು ಪ್ರತಿಪಾದಿಸಿದ್ದಾನೆ. ಗಣಗಳ ಬಣ್ಣ ದೇವತೆ ಮುಂತಾದ ಮಿಕ್ಕ ಕೆಲವು ನಂಬಿಕೆಗಳೂ ಅಷ್ಟೇ. ಪ್ರಾಯಶಃ ಕವಿಯು ತನ್ನ ಗ್ರಂಥವು ಕಾವ್ಯಲಕ್ಷಣ ಗ್ರಂಥ, ಬರಿಯ ಛಂದೋಗ್ರಂಥವಲ್ಲ, ಎಂದು ಭಾವಿಸಿದ್ದಿರಬಹುದು. ಆದ್ದರಿಂದಲೇ ನಾಲ್ಕನೆಯ ಆಶ್ವಾಸದಲ್ಲಿ, ಕವಿರಾಜಮಾರ್ಗದಲ್ಲಿರುವಂತೆ ಕನ್ನಡಗಳು ರಸ ಭಾವ ನಾಯಕ ನಾಯಕಿಯರು ಮುವ್ವತ್ತಾರು ಅಲಂಕೃತಿಗಳು ಲಿಂಗ ಸಮಾಸ ಆಖ್ಯಾತ ನಿಘಂಟು ಕಾಮಶಾಸ್ತ್ರ ಮನ್ಮಥಾಸ್ತ್ರ ಮೋಹ ವಿರಹ ಇವುಗಳನ್ನು ಹೆಸರಿಸಿದ್ದಾನೆ. ಹಿಂದಿನ ಲಕ್ಷಣಗ್ರಂಥಕರ್ತರಾದ ವಾಮನ ಭಾಮಹಾದಿಗಳು ತಮ್ಮ ಗ್ರಂಥಗಳಲ್ಲಿ ಬರಿಯ ಕಾವ್ಯಲಕ್ಷಣವನ್ನಷ್ಟೇ ಹೇಳದೆ, ವ್ಯಾಕರಣ, ನ್ಯಾಯಾದಿಗಳ ಪ್ರಯೋಗವನ್ನೂ ಸ್ವಲ್ಪಸ್ವಲ್ಪ ಸ್ಪರ್ಶಿಸಿದ್ದಾರೆ. ಕವಿಯಾದವನಿಗೆ ಬರಿಯ ವ್ಯಾಕರಣವಾಗಲಿ ಛಂದಸ್ಸಾಗಲಿ ಅಲಂಕಾರವಾಗಲಿ ನಿಘಂಟಾಗಲಿ ತಿಳಿದರೆ ಸಾಲದು, ಇವೆಲ್ಲವೂ ಬೇಕು ಎಂಬುದು ಅವರ ಭಾವ. ಅದೇ ಸಂಪ್ರದಾಯ ಮುಂದೂ ಕೆಲವು ಕಾಲ ನಡೆದುಕೊಂಡು ಬಂತು. ಆ ಸಂಪ್ರದಾಯವನ್ನೇ ಆಂಧ್ರಲಕ್ಷಣಗ್ರಂಥಕರ್ತರೂ ಈಶ್ವರ ಕವಿಯೂ ಅನುಸರಿಸಿರುವಂತೆ ತೋರುತ್ತದೆ. ಆದ್ದರಿಂದ 'ಕವಿಜಿಹ್ವಾಬಂಧನ'ವೆಂದರೆ ಕವಿಯ ನಾಲಗೆಗೆ ಛಂದಸ್ಸಿನ ಕಟ್ಟು ಒಂದೇ ಅಲ್ಲ, ಲಕ್ಷಣಶಾಸ್ತ್ರದೊಳಗೆ ಸೇರುವ ಮಿಕ್ಕೆಲ್ಲ ಶಾಸ್ತ್ರಗಳ ಕಟ್ಟೂ ಎಂದು ತಿಳಿಯಬೇಕು.

ಎ. ಆರ್. ಕೃಷ್ಣಶಾಸ್ತ್ರೀ.

॥ ಶ್ರೀರಸ್ತು ॥

# ಕ ವಿ ಜಿ ಹ್ವಾ ಬಂ ಧ ನ ಂ

## ಪ್ರಥಮಾಶ್ವಾಸಂ

ಶ್ರೀಮದ್ಗಂಗಾತರಂಗಾಂಕಿತ ಕಪಿಲಜಟಾಜೂಟಧಾರಾಭಿರಾಮಂ
ವಾಮಾಂಗಾಲಿಂಗ ಸಂಗಪ್ರವರಗಿರಿಸುತಾ ಚಾರುಲೀಲಾ ವಿಲಾಸಂ ।
ಭೀಮಂ ಕಾಮಾಂಗನಾಶಜ್ವಲಿತಚಟುಲಭಾಳಪ್ರತಾಪಾಗ್ನಿನೇತ್ರಂ
ಪ್ರೇಮಂ ಪರ್ವಿಕ್ಕೆ ನಂಮೊಳ್ ನಿಡುವಣಿಗೊಡೆಯಂ ಕಲ್ಲಿನಾಥಾಖ್ಯಲಿಂಗಂ ॥ *

ಕವಿಜಿಹ್ವಾಬಂಧನಮಂ
ಭುವನದ ಬುಧಜನರ ಚಿತ್ತಮೊಲಿಯಲ್ಪೇಳ್ದಂ ।
ವಿವಿಧಸುಲಕ್ಷಣಮಂ ಸ
ಪ್ರವರಗುಣಂ ಜಾಣಶಿರಿಯನೀಶಕವೀಶಂ ॥ ೧ ॥

ಲಕ್ಷಣಶಿಕ್ಷಾ[೧]ಚಾರ್ಯ ಸು
ಲಕ್ಷಣ ಕೇಶವನ ಶಬ್ದಮಣಿದರ್ಪಣಮಂ ।
ಈಕ್ಷಿಸಿ ಶಿಕ್ಷಿತಸೂತ್ರದೆ
ಸಾಕ್ಷಾದಭಿನವಸುಕೇಶಿರಾಜಂ ಪೇಳ್ಗಂ ॥ ೨ ॥

ಸಕ್ಕದಗಂನಡದವಿಶಿಯ
ಸಿಕ್ಕುಗಳಂ ಬಿಡಿಸಿ ಸರ್ವರಿಂ[೨] ಲಕ್ಷಣಮಂ ।
ಚಕ್ಕನೆಯರಿಪಂತುಸುರ್ದಂ
ಮಿಕ್ಕಭಿನವಕೇಶಿರಾಜನಾಮಕವೀಶಂ ॥ ೩ ॥

ಸೊಂಕಿಲ್ಲದೆ ಬಿರುನುಡಿಗಳ
ನಂಕಿಸದೆ ಮನೋನುರಾಗಮೃದುಪದತತಿಯಿಂ ।
ಪಂಕಜಮುಖಿ ಕೇವಣಿಸ
ಲ್ಕಂಕರಕವಿರಚಿತಸೆಂಬುದಾ ಪದ ಕವಿಯುಂ ॥ ೪ ॥

---

* ಇದಕ್ಕೆ ಮೊದಲು, 'ಶ್ರೀ ಗಣಾಧಿಪತಯೇ ನಮಃ ॥ ಕವಿಜಿಹ್ವಾಬಂಧನವೆಂಬ ಛಂದ ವೃತ್ತಗಳ ಬರವುದಕ್ಕೆ ಶುಭಮಸ್ತು ॥ ನಿರ್ವಿಘ್ನಮಸ್ತು ॥' ಎಂದಿದೆ.

೧ ಸಿಕ್ಷಾ ೨ ಚೇ

ಗುರುಲಘು ಮೂರಿರೆ ಮನಗಣ
ಗುರುಲಘು ಮೊದಲಲ್ಲಿ ಬರಲು ಭಯಗಣ ಮತ್ತಾ ।
ಗುರುಲಘು ನಡುವಿರೆ ಜರಗಣ
ಗುರುಲಘು ಕಡೆಯಲ್ಲಿ ಬರಲು ಸತಗಣಮಕ್ಕುಂ ॥ ೬ ॥

ಪೀತಂ ನೀಲಂ ರಕ್ತಸ
ಮೇತಂ ಶ್ಯಾಮಾಭ ಕೃಷ್ಣಮಸಿತಂ ಶುಭ್ರಂ ।
ನೀತಿಯುತೆ ಚಿತ್ರವರ್ಣಂ
ಪೀತಂ ಗಣಮೆಂಟುವರ್ಣಮಿಾ ಕ್ರಮದಿಂದಂ ॥ ೭ ॥

ಶಿರದೊಳ್ ದೇವ ಲಲಾಟದೊಳ್ ದಿನಕರಂ ನೇತ್ರಂಗಳೊಳ್ ತೋಯಮಂ
ಬರ ಕರ್ಣಂಗಳೊಳಿಂದು ವಕ್ತ್ರದೆಡೆಯೊಳ್ ತನ್ನಾಸಿಕಾಸ್ಥಾನದೊಳ್ ।
ಮರುತಂ ನಾಭಿಯೊಳಗ್ನಿ ಪಾದತಳದೊಳ್ ಪೃಥ್ವೀಗಣಂ ಭಾವಿಸ
ಲ್ಕರವಿಂದೋದ್ಭವನಂಗನಾಂಗತತಿಯಿಂದುತ್ಪತ್ತಿ ಕೇಳಂಗನೇ ॥ ೮ ॥

ಇನವಾರಂ ಜಗಣಂ ಸಮಂತು ಭಗಣಂ ಶೀತಾಂಶುವಾರಂ ಮಿಗಿ
ಲ್ಕನಕಾಹಂ ರಗಣಂ ಬುಧಾಹ ಸಗಣಂ ದೇವೇಜ್ಯವಾರಂ ನತಂ ।
ವಿನಮನ್ಮಥ್ಯವಿಲಾಸೆ ಕೇಳುದಿಸುಗುಂ ಶುಕ್ರಾಹದೊಳ್ ಸ್ವರ್ಗಣಂ
ಶನಿವಾರಂ ಮಗಣಂ ಗಣಂಗಳೊಗೆದತ್ತೀವೇಳು ವಾರಂ ಪ್ರಿಯೇ ॥ ೯ ॥

ಏಕಾಂಬಕಮನಿಲಂ ಮ
ತ್ತಾಕಾಶಂ ಜಲ ತಮೋರಿ ಶಶಿ ಯುಗನೇತ್ರಂ ।
ನಾಕಹುತಾಶನಧರೆಗೀ [೧]
ಲೋಕದೊಳಂ ಕಮಲನೇತ್ರೆ ನೇತ್ರತ್ರಯಗಳ್ ॥ ೧೦ ॥

ಪೆರೆ ಸೂರ್ಯರ್ಗೆರಡು ಭುಜಂ
ಧರೆ ಪುಷ್ಕರವಹ್ನಿಗಣಗಳಿಗೆ ಭುಜ ನಾಲ್ಕುಂ ।
ಕರಮಾರುಂ ಪವಮಾನಗೆ
ಹರಿಗೆಂಟುಂ ವ್ಯೋಮಗಣಕೆ ದಶಭುಜಮೆನಿಕುಂ ॥ ೧೧ ॥

ಕಮಠನತಿರಮ್ಯನಕ್ರಂ
ಸುಮನೋಹರಮೇಷಮೇಣವೃಷನಶ್ವಂ ತಾಂ ।
ಸಮನಿಕು ಕುರಂಗ ಮದಕರಿ
ಕ್ರಮದಿಂ ಗಣಕೆಂಟುವಾಹನಂಗಳೆನಿಕ್ಕುಂ ॥ ೧೨ ॥

---

೧ ರಿಂಗೀ : ಧರೆಗಂ (ಧಾ. ಮು.)

ಧರೆಗಿಂದೀವರಸಖನುಂ
ಸುರರ ನಿವಾಸಕ್ಕೆ ವಾಯುಗಣಮೆಂ[೪]ದುಚಿತಂ ।
ಸರಸಿಜಸಖಗಾಕಾಶಂ
ನಿರತಂ ಜಲವಾಯುಗಣಕಿವೊಂದೊಂದು ಸಖಂ ॥ ೧೩ ॥

ಮ ಯ ರ ಸ ತ ಜ ಭ ನ ಗಣಸಂ
ಚಯಕಂ ತಾಂ ಜ್ಯೇಷ್ಠೆ ಶತಭಿಷಕ್ಕೃತ್ತಿಕೆಯುಂ ।
ನಿಯತಸ್ವಾತಿ ಶ್ರವಣಂ
ನಯದೆ ಪುನರ್ವಸುವು ಮೃಗಶಿರಂ ಭರಣಿಯುಮುಂ ॥ ೧೪ ॥

ಮ ಯ ರ ಸ ತ ಜ ಭ ನ ಗಣಕಂ
ನಿಯತಂ ಬುಧ ಶುಕ್ರ ಭೂಮಿಸುತ ರವಿತನಯಂ ।
ಪ್ರಿಯೆ ಕೇಳಹಿ ರವಿ ಗುರು ಶಶಿ
ಪ್ರಯುಕ್ತರಾಗಿರ್ಕು ತದ್ಗ್ರಹರ್ತ್ಕ್ರಮದಿಂ ॥ ೧೫ ॥

ಮೂಡಲ್ ನಗಣಮದಿರ್ಕುಂ
ನೋಡಲ್ ದಕ್ಷಿಣದೆ ಮಗಣಕಕ್ಕುಂ ತಾಣಂ ।
ಬೀಡುಂ ಪಶ್ಚಿಮ ಯಗಣಕೆ
ಕೂಡುತ್ತರದಲ್ಲಿ ಭಗಣಕಕ್ಕುಂ ತಾಣಂ ॥ ೧೬ ॥

ರಗಣಮದಗ್ನಿಯೊಳಿರ್ಕುಂ
ಜಗಣಂ ನಿರುರುತದೊಳಿರ್ಕು ವಾಯುವ್ಯದೊಳಂ ।
ಸಗಣಮಿರುತಿರ್ಕು ಸತತಂ
ತಗಣವದೀಶಾನ್ಯದಲ್ಲಿ ನೆಲಸಿಹುದಬಲೇ ॥ ೧೭ ॥

ಧರೆ ಜಲವನಲಾನಿಲ ನಭ
ಸರಸಿಜಸಖ ಪೂರ್ಣಚಂದ್ರ ಪರಮಾತ್ಮಂ ತಾಂ ।
ಪರಮಶಿವನಷ್ಟತನುಗಳ್
ತರಳಾಕ್ಷೀ ಗಣಗಳೆಂಟರೊಳ್ ಸ್ಥಿರಮಿರ್ಕುಂ ॥ ೧೮ ॥

ನಗಣಂ ಬ್ರಹ್ಮಕುಲಕ್ಕಂ
ಭಗಣಂ ಕ್ಷತ್ರಿಯಕುಲಕ್ಕೆ ವೈಶ್ಯಕುಲಕ್ಕಂ ।
ಯಗಣಮದಕ್ಕಂ ಕಾಮಿಸಿ
ಮಗಣಂ ಶೂದ್ರರ್ಗೆ ಪೇಳೆ ಸತ್ಫಲಮಕ್ಕುಂ ॥ ೧೯ ॥

೪ ಸಖನಿಂ (ಮು. ಧಾ.)

ಸ್ತ್ರೀಲಿಂಗಂ ಮಯುಗಣಮುಂ
ಮೇಲಹ ರಸಭಜಗಣಂಗಳವು ಪುಲ್ಲಿಂಗಂ ।
ಬಾಲಕಿ ನತಗಣವೆರಡುಮ
ಸಾಲೋಕಿಸು ನಿತ್ಯಮವು ನಪುಂಸಕಲಿಂಗಂ ॥ ೨೦ ॥

ಮಗಣವ ಮೊದಲಿಟ್ಟಗ್ರದೆ
ರಗಣಮನಿಡೆ ನಾಶಮಕ್ಕು ಕೃತಿಕರ್ತಂಗಂ ।
ತಗಣಮನಿಟ್ಟಡೆ ತತ್ಪತಿ
ಪಗೆವರ್ಗಂ ಸೋಲ್ತು ಮಾನಭಂಗದೊಳಿರ್ಕುಂ ॥ ೨೧ ॥

ಮಗಣದ ಮುಂತಿಡೆ ಜಗಣವ
ನಗಣಿತಫಲಸಿದ್ಧಿಯಕ್ಕು ಮಗಣದ ಮುಂತಂ ।
ಸಗಣಮನಿಡೆ ಕೃತಿಕರ್ತಂ
ಪಗೆಯಂ ಬೆನ್ನಟ್ಟಿ ಕುಟ್ಟಿ ಕೀರ್ತಿಯನಾಳ್ಗುಂ ॥ ೨೨ ॥

ಯಗಣದ ಮುಂತಿಡೆ ಮಗಣವ
ಬಗೆಯಲ್ ಬಹುರಾಜ್ಯಮಕ್ಕು ಕೃತಿಕರ್ತಂಗಂ ।
ಮೃಗನಯನೆ ಯಗಣದಗ್ರದಿ
ಸಗಣವನಿಡೆ ವೈರಿಗಳ್ಗೆ ಸೋಲ್ವುದು ಪುಸಿಯೇ ॥ ೨೩ ॥

ಜಲಗಣದ ಮುಂತೆ ರಗಣವ
ನೊಲಿದಿಡೆ ದುಷ್ಫಲಮದಕ್ಕು ಯಗಣಾಗ್ರದೊಳಂ ।
ಸಲೆ ತಗಣವಿಟ್ಟೊಡಂ ಪತಿ
ಗೆಲವಂ ಪಗೆವರ್ಗೆ ಕೊಟ್ಟು ಬನಮಂ ಸಾರ್ವಂ ॥ ೨೪ ॥

ಒಪ್ಪುವ ಯಗಣದ ಮುಂದಂ
ತಪ್ಪದೆ ಜಗಣವನೊಡರ್ಚಲಂಬುಜವದನೇ ।
ಕಪ್ಪವನಿತ್ತರಿಗಳ್ ಬೆಂ
ಬಪ್ಪುದು ಮಿಗೆ ಬಂಟನಪ್ಪುದೇಂ ತಪ್ಪುಗುಮೇ ॥ ೨೫ ॥

ಗಂಧವಹಗಣದ ಮುಂದಂ
ಸಂಧಿಸಿ ಮಗಣವನುಸುದೊರ್ಡಕ್ಕತಿಲಾಭಂ ।
ಸುಂದರಿ ಕೇಳ್ ಜಗಣಾಗ್ರದೆ
ಬಂದೊಡೆ ಸಗಣಂ ವಿನಾಶಮಪ್ಪುದು ಪುಸಿಯೇ ॥ ೨೬ ॥

ಗಗನಗಣಾಗ್ರದೊಳಂ ತಾಂ
ಯಗಣಮನಿಡಲಶುಭಮಬ್ಜಮುಖಿ ಕರ್ತಂಗಂ ।
ದಗಣಿತಭಯಕೇಡಕ್ಕುಂ
ಪಗೆವರ್ಗಂ ಪೇಳವೇಡ ಪದಪದ್ಯಗಳೊಳ್ ॥ ೨೭ ॥

ಅಗನಿಗಣದೆಡಬಲಂಗಳೊ
ಳಗಣಿತಮೆನೆ ವಾಯುಗಣಮನಿಡೆ ಪದಪದ್ಯ ।
ಕ್ಕೊಗೆಗುಂ ಮರಣಂ ಪತಿಗಂ
ಬಗೆಯಲ್ವಿಧಿವಿಷ್ಣುರುದ್ರರಾರುಂ ಕಾಯರ್ ॥ ೨೮ ॥

ಸಭಗಣಮೆರಡಿರೆ ಶುಭದಂ
ರಭಗಣಮಿಡಲಶುಭಹಾನಿ ರಯಗಣಮಿಡೆ ತಾಂ ।
ಶುಭಮಕ್ಕುಂ ಜಯಗಣಗಳೊ
ಳುಭಯಕ್ಕಂ ಹಾನಿಯಕ್ಕು ಕೇಳ್ ಕಮಲಮುಖೀ ॥ ೨೯ ॥

ಸರಸಿಜಸಖದಗ್ರದೆ
ಮರುತನ ಸಖಗಣಮನಿಕ್ಕಿ ಪೇಳ್ದೊಡೆ ಮತ್ತಂ ।
ತರಸಿಂಗೆ ರಾಜ್ಯಲಾಭಂ
ಸ್ಥಿರಕಾಳಗದಲ್ಲಿ ರಿಪುಗಳಂ ಮಿಗೆ ಗೆಲ್ವಂ ॥ ೩೦ ॥

ತಗಣದ ಮುಂತಿಡೆ ಮಗಣವ
ಮಿಗೆ ದುಃಖಂ ನಗಣಮಿಕ್ಕೆ ವೈರಿಭಯಂ ತಾಂ ।
ಜಗಣವಿಡೆ ತೇಜಮಕ್ಕುಂ
ರಗಣಮನಿಡೆ ಕಾವ್ಯಕರ್ತು ರಾಜ್ಯವನಾಳ್ಗುಂ ॥ ೩೧ ॥

ರಗಣಾಗ್ರದೆ ರಗಣಮುಮಂ
ಸಗಣಾಗ್ರದೆ ಸಗಣಮಂ ಮಿಗಿಲ್ ಜಗಣಾಗ್ರಂ ।
ಜಗಣಮ ತಗಣಾಗ್ರದೆ ತಾಂ
ತಗಣವನಿಡವೇಡ ಪದ್ಯಪದಗಳೊಳೆಂದುಂ ॥ ೩೨ ॥

ಮಿಗಿಲೆನಿಪಗ್ನಿಗಣಾಂತ್ಯದೆ
ಜಗಣಮನಿಟ್ಟದರ ಮುಂತೆ ರಗಣವನಿಡೆ ಕೇಳ್ ।
ಸೊಗಯಿಪ ಮಂಗಲಮಕ್ಕುಂ
ದಗಣಿತ ಕವಿಮುಖ್ಯರರಿದು ಪೇಳ್ವುದು ಕೃತಿಯೊಳ್ ॥ ೩೩ ॥

ಇಂದುಗಣಾಂತ್ಯದೆ ತಗಣಂ
ಬಂದೊಡೆ ಜಯಕೀರ್ತಿಲಾಭಮಕ್ಕುಂ ಜಗಣಂ ।
ನಿಂದೊಡೆ ನಾಶಂ ಮಗಣಂ
ಸಂಧಿಸೆ ಕೃತಿಕರ್ತೃ ರಾಜ್ಯವಾಳ್ವಂ ರಮಣೀ ॥ ೩೪ ॥

ವಿಧುಗಣದ ಮುಂತೆ ಸಗಣಂ
ವಿಧಿಯಿಸುಗುಂ ತಗಣ ಘೋರರಣಮಂ ಮಾಳ್ಕುಂ ।
ವಿಧುಮುಖಿ ಜಗಣದೆ ಚಿತ್ರಂ
ಪದಕರ್ತಂಗಕ್ಕು ದುರ್ಧರೋದ್ಧತಕದನಂ ॥ ೩೫ ॥

ಇನಗಣದ ಮುಂತೆ ತಗಣವ
ನನುಸಂಧಿಸಿ ಪೇಳೆ ಸರ್ವತೇಜಗಳಕ್ಕುಂ ।
ವನಿತೆ ಮಗಣವನುಸುರ್ದೊಡೆ
ಘನಲಾಭಂ ಯಗಣಸಗಣಮಿಕ್ಕಲ್ಮರಣಂ ॥ ೩೬ ॥

ಭಾವಿಸೆ ಪದಪದ್ಯಂಗಳೊ
ಳಾವಾವಂ ಗಣಮನಿಕ್ಕಲವುಮಿವುಮೆಂನದೆ ।
ದೇವಗಣಮಿಟ್ಟು ಮುಂದ
ಕ್ಕಾವ ಗಣಂ ಬಂದಡುತ್ತಮಂ ಕಮಲಮುಖೀ ॥ ೩೭ ॥

ಪರುಷಂ ಸೋಂಕಿದ ಕರ್ಬುನ
ದಿರವುಂ ಪೊಸತಪ್ಪ ಮಿಸುನಿಯಪ್ಪಂತಕ್ಕುಂ ।
ಸುರಗಣದ ಮುಂದೆ ದುಷ್ಟೋ
ತ್ಕರಗಣಮಿಡೆ ಶುಭಮದಕ್ಕು ಘಟಕುಚಯುಗಳೇ ॥೩೮॥

ಸಿತವರ್ಣಂ ಮಗಣಂ ಭೂ
ಸತಿ ದೈವಂ ವಿಪ್ರರಾಜಕುಲಸಂಭೂತಂ ।
ಅತಿಶಯಸಿರಿ ಸಂತೋಷಂ
ಚತುರವಚೋರಚಿತೆ ಚಾರುಚಂಪಕನಾಸೇ ॥ ೩೯ ॥

ಯಗಣಂ ನವನೀಲಾಭಂ
ಸೊಗಯಿಪ ದೈವಂ ಜಲೇಶ ಶೂದ್ರಕುಲಂ ತಾಂ ।
ಮಿಗಿಲರ್ಥಧಾನ್ಯಲಾಭಂ
ಮೃಗಶಾಬಸುನೇತ್ರೆ ಸರಸಿಜೋಜ್ವಲಚರಣೇ ॥ ೪೦ ॥

ರಗಣಮುರುರಕ್ತವರ್ಣಂ
ಮಿಗೆಯಗ್ನಿಯದಕ್ಕೆ ದೈವ ಮುನಿವಂಶಂ ತಾಂ ।
ಬಗೆ ಮೃತಿ ರುಜೆ ಜಯ ಹರಭಯ[ಶ]
ಮೃಗನಾಭಿಸುಗಂಧಗಂಧಿ ಮದಗಜಗಮನೇ ॥ ೪೧ ॥

ನೀಲಾಭಂ ಮಿಗೆ ಸಗಣಂ ।
ಪಾಲಿಸುವಧಿದೈವ ತಾನೆ ನಿರುರುತಿ ಮತ್ತಂ ।
ಬಾಲಕಿ ಭಾವಿಸು ಭೀಕರ
ಹಾಲಾಹಲಸರ್ಪವಂಶ ಭಯಮಶುಭಕರಂ ॥ ೪೨ ॥

ಪೊಗೆವಂಣಂ ತಗಣಂ ತಾಂ
ಗಗನಂ ನಿತ್ಯಾಧಿದೈವ ಯಮಕುಲಮಕ್ಕುಂ ।
ಮಿಗೆ ದುಃಖ ಕೇಡು ಭಯಕರ
ಮೃಗಧರಮುಖಿ ಕಾವ್ಯಕರ್ತಗಪ್ಪುದು ನಿರತಂ ॥ ೪೩ ॥

ರಾಜಿಸುವ ರಕ್ತವರ್ಣಂ
ರಾಜಿಪ ಜಗಣಕ್ಕೆ ನಾಡೆ ಭಾಸ್ಕರ ದೈವಂ ।
ವ್ಯಾಜಂ ಭಯರೋಗಕರಂ
ಯೋಜಿಸೆ ಶೂದ್ರಾನ್ವಯಂ ಸುಚರಿತವಿಲಾಸೇ ॥ ೪೪ ॥

ಬಿಳಿದಪ್ಪ ವರ್ಣ ಭಗಣಂ
ನಳಿನದ ಪಗೆ ದೈವ ವೈಶ್ಯಕುಲಸಂಭೂತಂ ।
ತಿಳಿ ಕಾಂತಿಕೀರ್ತಿಲಾಭಂ
ಫಳಿಲನೆ ಪತಿಗಕ್ಕು ಶಾಶ್ವತಂ ಶುಭವಚನೇ ॥ ೪೫ ॥

ದೇವಗಣಂ ಪೀತಾಭಂ
ಭಾವಿಸೆ ಸುರಲೋಕಕ್ಕೆ ದೈವ ಸುರಕುಲ ಮತ್ತಂ ।
ತಾವಗ ಜಯಮಾಯುಷ್ಯಂ
ಶ್ರೀವಧು ನೆಲಸಿರ್ಕು ತುಂಬಿಬಂಬಲ್ಗುರುಳೀ ॥ ೪೬ ॥

ಇತ್ಯಭಿನವಕೇಶಿರಾಜ ವಿರಚಿತಮಪ್ಪ ಕವಿಜಿಹ್ವಾಬಂಧನ ಕಾವ್ಯದೊಳ್
ಗಣವಿವೇಕನಿರೂಪಣಂ ಪ್ರಥಮಾಶ್ವಾಸಂ ೬

---

ಶ. ರುಜೆಯುಂಮುಪಜಯ (ಮು), ರುಜೆಜಯ ಭವಹರ (ಧಾ)

೬. ಮಂಗಳ ಮಹಾ ಶ್ರೀ ಶ್ರೀ ಶ್ರೀಮತ್ಕೊಲ್ಲೂರ ಮೂಕಾಂಬಿಕೆ ಅವರ ದಿವ್ಯ ಶ್ರೀ ಚರಣಾರವಿಂದವೆ ಗತಿ.

# ದ್ವಿತೀಯಾಶ್ವಾಸಂ

ಮೊದಲಕ್ಕರದಿಂ ಮುಂತಣ
ದದು ನೋಡಲ್ಪ್ರಾಸದಕ್ಕರಂ ತತ್ಪ್ರಾಸಂ ।
ವಿದಿತಂ ನಾಲ್ಕುಂ ಪಾದ
ಕ್ಕುದಯಿಸುಗುಂ ವರ್ಣಮೊಂದೆ ಪದಪದ್ಯಗಳೊಳ್ ॥ ೧ ॥

ಹರಿ ಕರಿ ವೃಷಭಂ ತುರಗಂ
ಶರಭಮಜಂಗಳುಮೆನಿಪ್ಪ ಷಟ್ಪ್ರಾಸಕ್ಕಂ ।
ತರುಣಿ ನಿಜ ದೀರ್ಘ ಬಿಂದುವಿ
ನಿರದೊತ್ತುಂ ವ್ಯಂಜನಂ ವಿಸರ್ಗಂ ಬಕ್ಕುಂ ॥ ೨ ॥

ಸಿಂಗ ಗಜ ವೃಷಭ ಹಯಕಂ
ಮಂಗಲ ಸಂಪತ್ತು ಲಾಭ ಸಿರಿ ಮಿಗಿಲಕ್ಕುಂ ।
ಸಂಗಳಿಕು ಶರಭಮಜಕಂ
ತುಂಗನಿತಂಬಪ್ರಯುಕ್ತೆ ಕೇಡುಂ ಕಲಹಂ ॥ ೩ ॥

ಸದಮಲಸುಜ್ಞಾನೋದಧಿ
ಪದಕಮಲ ಸುರಮ್ಯ ಮಧುರವಾಕ್ಪ್ರಚುರಲಸ[೬] ।
ದ್ಧೃದಯಸರೋರುಹದಿನಕರ
ಮದನಾಂತಕನೆಂದು ಪೇಳೆ ಸಿಂಹಪ್ರಾಸಂ ॥ ೪ ॥

ಮಾರಾರಿಯದ್ರಿಜಾಕುಚ
ಹಾರಾಭಾರಾವಿಹಾರವಕ್ಷಸ್ಥಳಸ ।
ತ್ತಾರಾಪತಿಲೇಖಾಧರ
ರಾರಾಜಿತನೇತ್ರನೆನೆ ಗಜಪ್ರಾಸಕ್ಕಂ ॥ ೫ ॥

ಎಂದುಂ ಪುಟ್ಟಂ ಮರಣಮು
ದೆಂದುಂ ತನಗಿಲ್ಲವೆಂಬರುರುಭಜಕಜನಾ ।
ನಂದಂ ಶಂಭು ಸದಾಮೃತ
ಕಂದಂ ಶಿವನೆಂದೊಡಂ ವೃಷಪ್ರಾಸಕ್ಕುಂ ॥ ೬ ॥

---

೬ ಶ.

## ಕವಿಜಿಹ್ವಾಬಂಧನಂ

ಸಗ್ಗದ ಸರಸಿಜಭವಹಂ
ಗಗ್ಗಳಪದವಿಗಳನಿತ್ತು ನೆನೆವವರೆಡರಂ ।
ಮುಗ್ಗಿಪ ಮುಪ್ಪುರಮಂ ಕ
ಣ್ಣಗ್ಗಿಯೊಳಂ ಗೆಲ್ದನೆಂಬುದಶ್ವಪ್ರಾಸಂ ॥ ೭ ॥

ಸನ್ಮಾರ್ಗಾಸ್ಪದ ರಮ್ಯವಿ
ಯನ್ಮಣಿಶಶಿವಹ್ನಿನೇತ್ರ ವರನಿಗಮವಿದೂರ
ರನ್ಮಹಿಮಾಚ್ಚುತನುದ್ಯ
ಚ್ಚಿನ್ಮಯಶಿವನೆಂದೊಡಕ್ಕು ಶರಭಪ್ರಾಸಂ ॥ ೮ ॥

ಪಾಶಃ ಚ್ಛಿದುರಂ ತತ್ತ್ವಾ
ವಾಸಃ ಪರಿಪೂರ್ಣತೇಜ ಮದಮತ್ಸರನಿ ।
ರ್ನಾಶಃ ಪಂಚಾನನ ಸುವಿ
ಲಾಸಃ ಶಿವನೆಂದೊಡಂದಜಪ್ರಾಸಕ್ಕಂ ॥ ೯ ॥

ಮತ್ತಂ ಪ್ರಾಸಂ ಮೂದೆರ
ವೆತ್ತಲ್ಪಪ್ರಾಣಮುಂ ಮಹಾಪ್ರಾಣಂ ತಾ ।
ನೊತ್ತಿನ ಮಿತ್ರಾಕ್ಷರವರಿ
ಯುತ್ತುಂಗಮತಂಗಕುಂಭಕುಚಯುಗಯುಕ್ತೇ ॥ ೧೦ ॥

ಶಂಬರಶಿರಧರ ಮಹಿಮಾ
ಡಂಬರ ಕೈಲಾಸವಾಸ ಸುರಮಕುಟಮಣೇ ।
ಚುಂಬಿತಚರಣಸರೋರುಹ
ನೆಂಬುದು ತಾನಲ್ಪಜೀವ ವರ್ಣಪ್ರಾಸಂ ॥ ೧೧ ॥

ಕುಂಭಿಲಸಚ್ಚರ್ಮಧರಂ
ಗಂಭೀರಗಣಾತಿರಮ್ಯಗಂಗಾಜೂಟಂ ।
ಶುಂಭದ್ಭಕ್ತರ ಭಾಗ್ಯಂ
ಶಂಭುವೆನಲ್ಪ್ರಾಸದೆ ಮಹಾಪ್ರಾಣಾಖ್ಯಂ ॥ ೧೨ ॥

ವಿಧುಮುಖಿ ಮದನನ ಪಟ್ಟದ
ಮದಗಜನಿಭಯಾನೆ ಮಧುರವೀಣಾವಾಣೀ ।
ವಿದಿತವಿಲಾಸಿನಿ ಶೋಣಿತ
ಮೃದುಪದಯುಗೆ ಸುಗುಣೆಯೆನಲು ಮಿತ್ರಪ್ರಾಸಂ ॥ ೧೩ ॥

---

೪. ವಧೂ.

ಮದನಮದದಹನ ನತಹೃ
ತ್ಸದನ ಮಹಾದೋಷದಹನನುಜ್ವಲವಿಲಸ ।
ದ್ವದನ ನಿರಂತರಭವಭಯ
ನಿಧನನೆನುತ್ತುಸುರೆ ಯುಗ್ಮವರ್ಣಪ್ರಾಸಂ ॥ ೧೪ ॥

ಸುರಸಸಮನ್ವಿತ ಸತ್ಕವಿ
ಸರಸಿಸಮಾಜಾತಮುಕುಳವಿಕಸಿತಹಂಸಂ ।
ಸರಸಸಮನ್ವಿತನಿಜಕರ
ಶಿರಶಶಧರನೆಂದು ತ್ರ್ಯಕ್ಷರಪ್ರಾಸಕ್ಕುಂ ॥ ೧೫ ॥

ಅಕ್ಷರನಕ್ಷಯ್ ದಕ್ಷಶಿ
ರಕ್ಷಯ ಭುವನೈಕರಕ್ಷಣಂ ವಿಷಭಕ್ಷಂ ।
ವಕ್ಷೋಹಿಲಕ್ಷಿತಂ ನಿಟ
ಲಾಕ್ಷಂ ಶಿವನೆಂದೊಡಂದನುಪ್ರಾಸಕ್ಕುಂ ॥ ೧೬ ॥

ಕಾಮಿತವೀವ ಸುಚರಣಂ
ಭೀಮೋಂನತನಾಮ ನಿತ್ಯನಿರ್ಮಲಕರಣಂ ।
ಸೋಮಧರಂ ನಿರ್ಮರಣಂ
ಕಾಮಾಂತಕನುಗ್ರನೆಂಬುದಂತ್ಯಪ್ರಾಸಂ ॥ ೧೭ ॥

ವಡಿಯೆಂಬುದು ತೆಲುಗಿಂ ಪೇ
ಳ್ದೆಡೆಗಲ್ಲದೆ ಕನ್ನಡಕ್ಕೆ ಪೇಳದುದಿಲ್ಲಂ ।
ಮಡದಿ ನಿನಗರಿಯಪೇಳ್ವೆಂ
ಕಡುರಾಗದೊಳಾಂಧ್ರಮಾರ್ಗ ಕಾಣಿಸಿದನಿತಂ ॥ ೧೮ ॥

ಪದಪದ್ಯದ ಮೊದಲಕ್ಕರ
ವದು ತಪ್ಪದೆ ನಡುವೆ ಯತಿವಿಲಾಸದೊಳಿಡಲುಂ ।
ವಿದಿತದೆ ವಡಿಯಪ್ಪುದು ಮೃದು
ಪದಯುಗೆ ನಿರ್ಮಲಸುಚಿತ್ತೆ ಪರಹಿತಚರಿತೇ ॥ ೧೯ ॥

ಇಪ್ಪತ್ತು ತೆರದ ವಡಿ ತಾ
ನಿಪ್ಪವು ಮತ್ತವರೊಳೈದು ೧೦ ನಿರತದೆ ಬಳ್ಕುಂ ।
ಒಪ್ಪುವ ಭೀಮಣಮುಖ್ಯರ್
ತಪ್ಪದೆ ತರಳಾಕ್ಷಿ ಪೇಳ್ದ ಕಾಣಂಗಳೊಳಂ ॥ ೨೦ ॥

೯ ಬ. ೧೦ ಬುಂತ

ಸ್ವರವಡಿಯೆಂದುಂ ಮತ್ತಂ
ಸೆರಸದ ವಡಿ ಯೇಕವರ್ಣಸಂಧಿಪ ವಡಿಯುಂ ।
ನಿರತಂ ಸಂಯುಕ್ತಾಕ್ಷರ
ಬೆರಸಿದ ವಡಿ ವರ್ಗವಡಿಯ ಭೇದಗಳೈದುಂ ॥ ೨೧ ॥

ಸೀಸಕ್ಕಂ ಪದಗಳ್ಗಂ
ಭಾಸುರಮಪ್ಪಂತಿರಿಡುಗೆ ಭಾವಿಸಿ ವಡಿಯಂ ।
ಪ್ರಾಸಮಿರದೊಪ್ಪಲಭಿನವ
ಕೇಶವನನುಮತದೆ ಚಾರುಕಿಸಲಯಪಾಣೀ ॥ ೨೨ ॥

ಕಂದದ ಮೊದಲ ಪದಕ್ಕಂ
ಸಂಧಿಸದದು ವಡಿವಿಭಾಗ ಸತತಂ ಮತ್ತಂ ।
ಬಂದಪುದೆರಡನೆಯ ಪದ
ಕ್ಕೆಂದುಂ ವಡಿ ತಪ್ಪದಂತೆ ಕೇಳ್ ಚಾರುಕಚೇ ॥ ೨೩ ॥

ಪುರುಹೂತಗಣಗಳಾರುಂ
ಸರಸಿಜಸಖಗಣಗಳೆರಡು ಸಂಧಿಸಿ ಬರ್ಕುಂ ।
ಚರಣಕ್ಕೆ ಸೀಸದಂತ್ಯದೊ
ಳೊರೆ ಗೀತಿಯ ಸರಳಮಪ್ಪೊಲೋದುವ ತೆಱದಿಂ ॥ ೨೪ ॥

ಕವಿಜಿಹ್ವಾಬಂಧನದೊಳ್ ದ್ವಿತೀಯಾಶ್ವಾಸಂ ೧೧

---

೧೧ ಶ್ರೀ ಶ್ರೀ ಶ್ರೀ ಶಾರದಾಯೈನಮಃ ಶ್ರೀ ಶ್ರೀ ಶ್ರೀ

# ತೃತೀಯಾಶ್ವಾಸಂ

ಅ ಚ ನ ರ ಜ ವೆಂಬಿವೈದುಂ
ಸ ಚ ಕ ಟ ಹ ಯ ಮೆಂಬಿವಾರು ವರ್ಣಾಕ್ಷರಮಂ ।
ಪ್ರಚುರದೆ ಗುರುಗಳ್ಮಾಡಿ ಸು
ರಚನೆಯೊಳಿಡೆ ಪದ್ಯಪದಕೆ ನಿರ್ದೋಷಕರಂ ॥ ೧ ॥

ಕ ಚ ಟ ಸ್ವರ ವಿಪ್ರಕುಲಂ
ಪ್ರಚುರಂ ತ ಪ ವರ್ಗವೆರಡು ನೃಪಕುಲಜನಿತಂ ।
ಸುಚರಿತ ಶ ಷ ಸ ಹ ವೈಶ್ಯಂ
ಉಚಿತವಚೀ ಉಳಿದವಾರು ಶೂದ್ರಾಕ್ಷರಗಳ್ ॥ ೨ ॥

ಎಸೆವಾ ಈ ಊ ಏ ಓ
ಪ್ರಸಿದ್ಧವೈದುಸ್ವರಂಗಳೊಂದಿದ ವರ್ಣಂ ।
ಶಶಿಮುಖಿ ಬಾಲ ಕುಮಾರಂ
ವಸುಧಾವರ ವಾರ್ಧಿಕಂ ಮೃತಸ್ವರಮುಕ್ಕುಂ ॥ ೩ ॥

ಕಾ ಕೀ ಕೂ ಕೇ ಕೋ ಯೆಂ
ದಾ ಕಮಲದಳಾಕ್ಷಿ ಗುಣಿತದಕ್ಷರವರಿ ನೀಂ ।
ಕೋಕದ್ವಯಕುಚೆ ಕವಿತೆಗೆ
ಲೋಕಕ್ಕುಪಕಾರಿಯಾಗಿ ಲಕ್ಷಣಮುಸುರ್ವೆಂ ॥ ೪ ॥

ಬಾಲಸ್ವರವಿಡೆ ಶೂನ್ಯಂ
ಲಾಲಿತ ಧನಲಾಭ ವಾಕುಮಾರಸ್ವರದಿಂ ।
ಸಾ೧೨ ಲುಗೆನಿಪರ್ಥ ರಾಜ್ಯದಿ
ಬಾಲಕಿ ವಾರ್ಧಿಕದೆ ರೋಗ ಮೃತಿಯಿಂ ಮೃತಿಯುಂ ॥ ೫ ॥

ಕುವಲಯದಳನಿಭಲೋಚನೆ
ಶಿವಶಕ್ತಿಯುಗಂಗಳೊಂದಿ ನಿಂದಕ್ಕರಮಂ ।
ಕವಿಯರಿತು ಪೇಳ್ವುದುತ್ತಮ
ವವರೊಳ್ತಾಂ ಬಿಂದು ವ್ಯಂಜನಂ ಬರಸಲ್ಲಂ ॥ ೬ ॥

---

೨. ಸೋ. ಸಾಲುಗೆನಿಪ = ಸಾಕೆನ್ನು ವಷ್ಟು.

ಸ್ವರಗಳ್ಪುಲ್ಲಿಂಗಂ ತಾ
ನುರುತರಸದ್ವ್ಯಂಜನಂಗಳವು ಸ್ತ್ರೀಲಿಂಗಂ ।
ಗುರುಕುಚೆ ಬಿಂದುವಿಸರ್ಗೋ
ತ್ಕರಮೊಂದಿದ ವ್ಯಂಜನಂ ನಪುಂಸಕಲಿಂಗಂ ॥ ೭ ॥

ವಿಧುಮುಖಿ ವರ್ಗಗಳೈದರ
ಮೊದಲಕ್ಕರ ಮೂರರಕ್ಕರಂಗಳವೆಲ್ಲಂ ।
ವಿದಿತವವಲ್ಪಪ್ರಾಣಂ
ಒದವಿದೆರಳ್ನಾಲ್ಕವುಂ ಮಹಾಪ್ರಾಣಂಗಳ್ ॥ ೮ ॥

ಪದಪದ್ಯದ ಮೊದಲಕ್ಕರ
ಕೊದವಿದ ಶುಭಗ್ರಹದ ದೃಷ್ಟಿಯಿದ್ದಕ್ಕರಮಂ ।
ವಿದಿತವಿಡಬಲ್ಲಡಾತನೆ
ಸುಧೆಗವಿಯಂನದರುಮೋಳರೆ ಸುಮನೋಗಂಧೀ ॥ ೯ ॥

ಕವಿತಾಪತಿ ನಾಮಾಕ್ಷರ
ಕವಿತಾಕಂನಿಕೆಯನಾಮುದಕ್ಕರಕಂ ತಾಂ ।
ಕವಿಯುಂದು ಪತ್ತುಕೂಟದ
ವಿವರಣೆಯಂ ಪೇಳ್ವುದುತ್ತಮಂ ತನುಮಧ್ಯೇ ॥ ೧೦ ॥

ಇನನಿರ್ದ ತಾರೆಯಿಂ ಮುಂ
ದನುಗೊಳಿಸಿದ ಋಕ್ಷವೇಳು ನಿರ್ಜೀವಂಗಳ್ ।
ಘನಕುಚೆ ಪಂನೆರಡುಂ ಜೀ
ವನಮುಳ್ಳವು ರುಜೆಯೊಳಿರ್ಕು ಮುಂತೊಂಭತ್ತುಂ ॥ ೧೧ ॥

ದಶಕೂಟದ ವಿವರಣೆಯಿಂ
ದೆಸೆವ ಶುಭಗ್ರಹಗಳಿರ್ದ ಋಕ್ಷಾಕ್ಷರದಿಂ ।
ವಿಶದಗಣಮಿಶ್ರದಿಂ ಭಾ
ವಿಸಿ ದೋಷಗಳಿಲ್ಲದಂತೆ ಪೇಳ್ವುದು ಕಾಂತೇ ॥ ೧೨ ॥

ವಿಷಮಮೃತವಾಕ್ಯಮೆಂಬಿವು
ಶಶಿಮುಖಿ ಕವಿಗಳ್ಗವಿಲ್ಲವೆಂಬರ್ಮನುಜರ್ ।
ಪುಸಿಯೆ ಬಹುದೋಷಗಳನಿ
ಟ್ಟುಸುರ್ದೊಡೆ ನಂಜೇಕೆ ಖಡ್ಗವೇಕೆಲೆ ಕಾಂತೇ ॥ ೧೩ ॥

ಮೊದಲ ಸ್ವರ ಕಷ್ಟಂ ತಾಂ
ತದನಂತರದಾ ಸ್ವರಂ ಪ್ರಯೋಗಮದಕ್ಕುಂ ।
ಅದರಿಂ ಮುಂತೀ ಕ್ರಮದಿಂ
ದೊದಗಿರ್ದ ಚತುಷ್ಟಯಸ್ವರಂ ಧನಲಾಭಂ ॥ ೧೪ ॥

ಮತ್ತವರ ಮುಂತಣ ಸ್ವರ
ಮುತ್ತಮಮಲ್ಲಂ ಚತುಃಕವವರಿಂ ಮುಂತಂ ।
ಬಿತ್ತರದೊಳಿರ್ದ ನಾಲ್ಕುಂ
ಚಿತ್ತೋತ್ಸವ ಕಾಮ ಲಾಭ ಲಕ್ಷ್ಮೀಕರಮುಂ ॥ ೧೫ ॥

ಸುದತಿ ಕ ಖ ವರ್ಣ ಶುಭದಂ
ತದನಂತರವಿರ್ದ ಗ ಘ ಗಳಪಜಯಮಕ್ಕುಂ ।
ವಿದಿತಂ ಚ ಛ ಸುಖ ಲಾಭಂ
ವಿದಳಿಸುಗುಂ ಸಿರಿಯ ಜ ಝ ಟ ಠಂ ಗಳ್ನಾಲ್ಕುಂ ॥ ೧೬ ॥

ಡ ಸ್ಸುಖ ಢ ಭಯಂ ಣ ಲ ಯಂ
ತ ಶ್ಶುಭ ಥಾದ್ಯೃದ್ಧ ದಧಗಳೆರಡತಿಲಾಭಂ ।
ನ ಸ್ಸಕಲದುಃಖಮಪಜಯ
ನಿಶ್ಶಂಕಂ ಪ ಫ ಬ ಭ ಮ ಯಂ ಗಳ್ ಶುಭದಂ ॥ ೧೭ ॥

ದುರಿತಕರ ಪೊಲ್ಲ ರಾಕ್ಷರ
ನಿರತಂ ಲ ವ ಕಾಮದಾಯಕಂ ಶಂ ಶುಭದಂ ।
ಹರುಷಕೃತಂ ಷಾವರ್ಣಂ
ಕರಶುಭದಂ ಸಂಕ್ಷರಂ[೧೩] ಹವರ್ಣಂ ದಾಹಂ ॥ ೧೮ ॥

ಳಾವರ್ಣಂ ಧನಲಾಭಂ
ಭಾವಿಸಿ ವರ್ಣಂಗಳಂ ಶುಭಾಶುಭಫಲಮಂ ।
ಕೇವಣಿಸಲ್ಪದಪದ್ಯ
ಕ್ಕಾವಗ ಸತ್ಕವಿಗೆ ಕೀರ್ತಿ ಶುಭಧನಮಕ್ಕುಂ ॥ ೧೯ ॥

ಳ ಕ್ಷ ಥ ಚ ಭ ಜ ಝ ಟ ಠ ಹ ಷ
ದಕ್ಷರ ರ ಲ ಜ್ಞ ಯ ಣ ನ ಮಂ ಗಳೆಂಬಿವು ವಿಲಸ ।
ದ್ವೃಕ್ಷೋಜದ್ವಯರಮ್ಯಸು
ಲಕ್ಷಣೆ ಕೇಳ್ಕೊದಲೊಳಿಡಲು ಭಯಮಶುಭಕರಂ ॥ ೨೦ ॥

೧೩. ಸಾಕ್ಷರಂ ?

ವರ್ಣಂ ಕ ಖ ಗ ಘ ಡ ಢ ತ ಗ
ಳರ್ಣಂ ದ ಧ ಪ ಫ ಬ ಭಂ ಯ ವಂ ಶ ಸ ಗಳ್ತಾಂ ।
ನಿರ್ಣಯವನರಿದು ಮೊದಲೊಳ್
ಪೂರ್ಣಸುಧಾಸೂತಿವಕ್ತ್ರೆ ಪೇಳ್ದೊಡೆ ಶುಭದಂ ॥ ೨೧ ॥

ಈ ವಿಧದ ಲಕ್ಷಣಂಗಳ
ಭೂವಲಯಜನಂಗಳರಿಯೆ ವಾಗ್ವಧುವರದಂ ।
ಭಾವಜ್ಞರಸಿಕರಂಜಿತ
ಕೋವಿದಸದ್ವಂಶನೊತ್ತ ಕೇಶವನುಸುರ್ದಂ ॥ ೨೨ ॥

ಅರಿಯೂರ್ಧ್ವಮುಖ ನಿಜಾರ್ಣಂ
ಮೆರೆವಾ ಗುಡುಸು[೧೪] ಗಳೆಸೆವಧೋಮುಖವರ್ಣಂ ।
ತರುವಾಯ ಕೊಂಬಿನಕ್ಕರ
ಪೆರೆನೊಸಲಳೆ ಪಾರ್ಶ್ವಮುಖಮದೆಂಬರ್ಕವಿಗಳ್ ॥ ೨೩ ॥*

ಅರಸಿಂಗೂರ್ಧ್ವಮುಖಾಕ್ಷರ
ತುರಗಾರೂಢಂಗೆ ಪೇಳೆ ತಿರ್ಯಙ್ಮುಖಮಂ ।
ಚರಣಗತಿಯುಳ್ಳವಂಗಂ
ನಿರತಮಧೋಮುಖಸುವರ್ಣಮಾಗಲ್ಶುಭದಂ ॥ ೨೪ ॥ *

ಕೊರಲುಂ ಜಿಹ್ವಾಮೂಲಮು
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ ।
ಶಿರಮುಂ ದಂತಮುಮೆಂದ
ಕ್ಕರಮುದಯಿಸ ತಾಣಮಾದುವೀ ಪೇಳ್ದೆಂಟುಂ ॥ ೨೫ ॥

ಹರಿ ಧರೆ ಪಂಚಬಾಣ ನುತಕೌಶಿಕದೇವಪ!ಶಕ್ತಿ ಹಸ್ತಿ ಭಾ
ಸುರವರಹಾವತಾರೆ ವನವಶ್ವಿನಿ ದೈವವನಂತಕಾಮುಖೀ ।
ಕರಮಹಿಷಾಗ್ನಿ ಚಂಡಶಿರ ಹಸ್ತಿ ಪುರಾಂತಕ ವಾಗ್ವಧೂವರಂ
ಸುರುಚಿರಕಾಮುಪಾಲ ಕಮಲಪ್ರಿಯನಬ್ಜಜನಗ್ನಿ ಮಿತ್ರನುಂ ॥ ೨೬ ॥

ದಿನಪತಿ ದೈತ್ಯದರ್ಪಹರ ವಿಘ್ನಪ ಮಾನುಷಸಿಂಗ ವಾಮನಂ
ಘನಶಿಖಿವಾಹನಂ ಗಿರಿಜೆ ಭೈರವ ಬುದ್ಧ ಯಮಂ ನೃವಾಹನಂ ।
ಮನಸಿಜಮರ್ದನಂ ಪ್ರವರರುದ್ರ ಸರಸ್ವತಿ ಸರ್ವ ಪಂನಗಾ
ಶನ ಮಿಗೆ ನಂದಿನಾಥ ಕಮಲಪ್ರಿಯನೀಶ್ವರವೀರಭದ್ರನುಂ ॥ ೨೭ ॥

---

೧೪. ಗಂಡುಸು     * ಈ ಎರಡು ಪದ್ಯಗಳೂ ಧಾಪ್ರತಿಯಲ್ಲಿಲ್ಲ.

ವಾಸವನಶ್ವಿನಿ ಪ್ರಭು ಭಯಂಕರಕಾಳಿಯು ಕಾಲರುದ್ರನಾ
ಭಾಸುರವಾಯು ವಹ್ನಿ ಸುರವಲ್ಲಭ ಪಾಶಿ ಸಮುದ್ರಜಾತೆ ತಾ ।
ನಾಸುರನಾಥಮಿತ್ರ ಗಿರಿಶಂಕರನುಗ್ರನೃಸಿಂಹರೆಂಬಿವರ್
ಕೌಶಲವಾಣಿ ಕೇಳ್ ಸಕಲವರ್ಣಗಳಾಧಿಪರಂ ಕ್ರಮಂಗಳಿಂ॥ ೨೮ ॥

ಭಾವಕಿ ಕೇಳಕ್ಷರಗಳ
ದೇವತೆಗಳನುಗ್ರಶಾಂತಮೂರ್ತಿಗಳಂ ತಾಂ ।
ಭಾವಿಸಿ ತಿಳಿಯಲ್ಬಲ್ಲೊಡ
ಮಾವಗ ತತ್ಕವಿತೆಗಂ ಶುಭೋದಯಮಕ್ಕುಂ ॥ ೨೯ ॥

ಶಿವನೈದು ಮೊಗದೊಳಂದು
ದ್ಭವವಾಗಿ ಪಂಚಭೂತವರ್ಣಂಗಳುಮಂ ।
ಕವಿಯರಿದು ಪತ್ತುವರ್ಗದ
ವಿವರಣಮಂ ನೋಡಿ ತಿಳಿವುದಂಬುಜವದನೇ ॥ ೩೦ ॥

ನೊಂದರ್ ಬೆಂದರ್ ಕೋಪದೆ
ಕಂದಿರ್ದರ್ ಕೂಳನೊಲ್ಲದಿದಿರರಿಯುತರ್ ।
ವೊಂದಿದರಾಪತ್ತಿಂ ಕಳೆ
ಗುಂದಿದರೆಂದುಸುದರ್ಘಡಶುಭ ನಾಂದೀಪದದೊಳ್ ॥ ೩೧ ॥

ಪದಕವಿತಾಲಕ್ಷಣಂ

ಸರಿ ಪಣೆ ಕಡಿ ಮಡಿ ತೊರೆಯುರಿ
ಬಿರಿಯುರಿ ಕೆಡು ಕಾಡು ಕೆಡೆ ಕಡೆ ಪಾಳುಂ ।
ಜರಿಯುಳಿ ಕೊಳೆ ಸುಡು ತಾರುಂ
ಬರಿಯೆಂಬಿವು ಪದದ ಮೊದಲೊಳಿರಲಶುಭಕರಂ ॥ ೩೨ ॥*

ಲಿಂಗತ್ರಯ ವಚನತ್ರಯ
ಕಂಗೊಳಿಸುವ ಕಾಲ ದೇಶ ಪುರುಷತ್ರಯಮಂ ।
ಸಂಗೊಳಿಸದೆ ಯೊಂದೊಂದನೆ
ಹಿಂಗದೆ ಪಿಡಿದೊರೆವುದಬಲೆ ಪಲ್ಲವಿಪದದೊಳ್ ॥ ೩೩ ॥*

ಮೊದಲೊಳ್ ಗಣಗಳ ನಾನಾ
ವಿಧಭೇದಾಭೇದಮಂ ವಿಚಾರಿಸಿ ಬಳಿಕಂ ।
ಪದಮಿಡುವುದುಚಿತ ವಾಕ್ಯದಿ
ಮುದದಿಂ ಕೇಳ್ಕಾಂತೆ ಕವಿತೆಪೇಳ್ದಪೆನೆಂಬಂ ॥ ೩೪ ॥

* ಈ ಎರಡು ಪದ್ಯಗಳೂ ಧಾಪ್ರತಿಯಲ್ಲಿಲ್ಲ.

ತನು ವಾದ್ಯಂ ಸಾಲಗೆ ವಾ
ದನದಂಡಂ ಕರ್ತುವಾತ್ಮನವನ ಮನೋವೃ।
ತ್ತಿ ನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಳವರ್ಣಮಕ್ಷರರೂಪಂ ॥ ೩೫ ॥

ಪದಪದ್ಯದೆ ಪತಿನಾಮ
ಕ್ಕೆದಿರುಂ ಪಿಂತಂ ಸಮಂತು ಶುಭವಾಚಕಮಂ।
ವಿಧುಮುಖಿ ಸಂಧಿಸೆ ಜಯ ಸಂ
ಪದಮಿರ್ವರಿಗಕ್ಕು ನಾಡೆ ಶಾಸ್ತ್ರೋಕ್ತಿಗಳೊಳ್ ॥ ೩೬ ॥

**ಇತಿ ಕವಿಜಿಹ್ವಾಬಂಧನಕಾವ್ಯದೊಳ್ ತೃತೀಯಾಶ್ವಾಸಂ ೧೫**



---

**೧೫.** ಮಂಗಳಮಹಾ ಶ್ರಿಶ್ರಿಶ್ರಿ

## ಚತುರ್ಥಾಶ್ವಾಸಂ

ಕನ್ನಡಗಳ ಬಗೆ ಸಾಸಿರ
ದಿನ್ನೂರುಂ ಭೇದಮಕ್ಕು ಮತ್ತವರೊಳಗಂ ।
ಸನ್ನಿಧಿಯಾಗ್ಗೈದುಮನರಿ
ಸನ್ನು ತತರಕವಿತೆಪೇಳ್ವೆನೆಂಬರ್ಜಗದೊಳ್ ॥ ೧ ॥

ಒಳುಗನ್ನಡ ಬೆಳುಗನ್ನಡ
ಪಳೆಗನ್ನಡ ದೇಶಿಯಂಗಳಾ ಕನ್ನಡಮಂ ।
ತಿಳಿ ಸಕ್ಕಜಗನ್ನಡಮುಮ
ನಿಳೆಯೊಳ್ಕವಿತಾಮಹಾತ್ಮ್ಯೆಯಂ ಮೆರೆವ ನರಂ ॥ ೨ ॥

ಸಂದರ್ಭಂ ಮೃದುಗನ್ನಡಂ ಒಟಕುಳಂ ತಾನೀಕ್ಷಿಸಲ್ಶೋರ್ಪ ನಿ
ಸ್ಸಂದೇಹಕ್ಷಳಮಿತ್ರಮೇಕಮನುಕೂಲಂ ಕಾರ್ಕಕಾಠಿಣ್ಯಮುಂ ।
ನಿಂದಾಸಂಸ್ತುತಿ ಹಾಸ್ಯದೋಷ ಲಲಿತಾಪಭ್ರಂಶಭಾವಂ ರಸಂ
ಸಂದಿರ್ದಾ ಬಹುಭೇದ ಕನ್ನಡಗಳಂ ಬಲ್ಲಂ ಕವೀಶಂ ದಿಟಂ ॥ ೩ ॥

ಪಳೆಯೊಳುಗನ್ನಡಂ ವಿಶದತದ್ಭವತತ್ಸಮಮಚ್ಚಗನ್ನಡಂ
ಬೆಳುನುಡಿ ದೇಶಿ ಗ್ರಾಮ್ಯವಿನಿಗನ್ನಡಮಾ ಸೊಬಗುಂ ವಿಶಾಲಮುಂ ।
ತಿಳಿಯತಿಗೂಢಗನ್ನಡವಸಾ ಮರೆಗನ್ನಡ ಸಾರಗನ್ನಡಂ
ಗಳು ಮೊದಲಾದ ಸಾಸಿರದಮೇಲೆರಳ್ನೂರುಮಿವಾದಿಯಾದವಂ ॥ ೪ ॥

ಸಕಲ ರಸಭಾವಮಂ ನಾ
ಯಕನಾಯಕಿ ಸಖಸಖೀವಿಭೇದಂ ಸುರತ ।
ಪ್ರಕಟವನವಸ್ಥೆ ಪೆತ್ತರ
ವಿಕಲವಸಾ ವಿಪ್ರಲಂಭಗಳನರಿ ಕಾಂತೇ ॥ ೫ ॥

ಮೂವತ್ತಾರಾಲಂಕೃತಿ
ಯಾವುದವೆಂದೆಂಬ ಭೇದಮಂ ತಿಳಿ ಮತ್ತಂ ।
ಜೀವಗಳ್ಪತ್ತನರಿ ಸಂ
ಭಾವಿಸಿ ರೀತಿಗಳ ವೃತ್ತಿಗಳನೊಲಿದಬಲೇ ॥ ೬ ॥

---

ಈ ನಾಲ್ಕು ಪದ್ಯಗಳೂ ಧಾಪ್ರತಿಯಲ್ಲಿಲ್ಲ.

ಅರಿ ಲಿಂಗಗಳೊಂಬತ್ತುಂ
ನೆರೆ ಸಂಧಿಗಳೆರಡನಾ ಸಮಾಸಗಳಾರಂ ।
ಮೆರೆವ ವಿಭಕ್ತಿಗಳೆಂಟರ
ತೆರನಂ ಪ್ರಕೃತಿಗಳ ಪ್ರತ್ಯಯಾದೇಶಗಳಂ ॥ ೭ ॥

ಭೂತವತಿ ವರ್ತಮಾನ ಸ
ಮೇತಭವಿಷ್ಯತ್ತಿಗಾದ ದ ದಪ ವಕಾರಂ ।
ಧಾತುಗಳ್ಪ್ರಥಮಮಧ್ಯಮ
ಮಾತೆರದುತ್ತಮದ ಪುರುಷಗಳ್ಕ್ರಿಯೆಯರಿ ನೀಂ ॥ ೮ ॥

ಪತ್ತು ನಿಘಂಟಿನ ಶಬ್ದದ
ಬಿತ್ತರಗಳನರಿದು ಸಕಲಕಾವ್ಯಾರ್ಥಗಳಂ ।
ಚಿತ್ತಗೊಟ್ಟೋದಿದು ತಿಳಿ ನೀಂ
ಮತ್ತಂ ಜಾತಿಗಳನೆಸೆವ ಮದನಾಗಮಮಂ ॥ ೯ ॥

**ಅರಿಸಮಾಸಲಕ್ಷಣೋದಾಹರಣಂ**

ಸುರಮರ ಸುಮನೋರನ್ನಂ
ಸರಸಿಜವೊಗ ಕುಂಭಿಕುಂಭವೊಲಿಗಳ್ಮತ್ತಂ ।
ವರಕುಮುದಕಂಗಳೊಪ್ಪುವ
ತರುಣಿಯೆನುತ್ತು ಸುರ್ದರಿಸಮಾಸಮದೆಂಬರ್ ॥ ೧೦ ॥

**ಅರಿಸಮಾಸರಹಿತಮಾದುದಕ್ಕುದಾಹರಣಂ**

ನಗೆ ನಯನಮಡಿಗಳರುಣಂ
ಮೊಗಸಸಿ ಮಿಗೆ ನೀಳ್ದ ಕೇಶ ಷಟ್ಪದಿಗಳ್ತಾ ।
ನುಗುರ್ದೀಧಿತಿ ನಡೆ ಯಿಭಗತಿ
ಸೊಗಯಿಸುವುವೊರ್ವಳ್ಗೆನಲ್ಕಮದು ನಿರ್ದೋಷಂ ॥ ೧೧ ॥

ಒಂದೆರಡಕ್ಕರಗಳನರಿ
ದಂದುಂ ಕವಿಯೆಂದು ಗರ್ವಿಪರ್ಲಕ್ಷಣದೊಳ್ ।
ಗೊಂದುಮನರಿಯರ್ಭಾವಕಿ
ನಿಂದಿಪರೊಳ್ಗವಿಗಳಂ ಕರಂ ಕುಕವಿಚಯಂ ॥ ೧೨ ॥

ಬೇಕೆಂಬರೇನನರಿಯದ
ಕಾಕನ ಕವಿಯೆಂದು ಸುಕವಿಯಂ ಕಂಡೊಡೆ ಪೋ ।
ಸಾಕೆಂಬರ್ ಕಲಿಯುಗದವಿ
ವೇಕಿಗಳೆಗ್ಗರ್ಪಡೇಭವಿಲಸಿತಯಾನೇ ॥ ೧೩ ॥

ಕುಮುದ ನವೀನಮೊಲ್ಲೆ ಸುರಹೊಂನೆ ಸುಪಢ್ಡಳಿ ಪೂಗ ಲೊಕ್ಕಿಯು
ತ್ತಮವಹ ಕೆಂಪುದಾವರೆಗಳಾ ಬಲುಗೇದಗೆ ಮಾವು ಚಂಪಕಂ ।
ಸುಮನಸಪೂರಪಢ್ಡಳಿ ಸುಮಲ್ಲಿಗೆ ಬಾಳೆಯಶೋಕೆ ಜಾಜಿ ತ
ತ್ಕ್ರಮದೆ ಶಿರೀಷ ಕೇಳ್ಕೆಳದಿ ಯೀಪದಿನಾರಸಮಾಸ್ತ್ರನಂಬುಗಳ್ ॥೧೪॥೧೬

ನೆರೆದಿಂಗಳ್ದಿನಪಂ ಬಸಂತ ಸತತಂ ನಂದೀಶನಂತೀಶ್ವರಂ
ಮೆರೆವಭ್ರಂ ಕುಸುಮಾಸ್ತ್ರನಯ್ಯ ಬಿದಿ ತಾಂ ಭೋಗೀಂದ್ರ ವೀರೇಶ್ವರಂ ।
ಪೆರೆದಾಳ್ದಾತನ ರಾಣಿಯಗ್ನಿ ಗಣಪಂ ದೇವೇಂದ್ರ ವಾತಂ ಜಲಂ
ನರಮೀನಧ್ವಜನಿಂತಿವರ್ಕ್ರಮದೆ ಪುಷ್ಪಾಸ್ತ್ರಾಧಿದೇವರ್ಕಳುಂ ॥ ೧೫ ॥

---

೧೬ ಪ್ರತ್ಯಂತರೇ ಮನ್ಮಥಾಸ್ತ್ರಗಳ್—

a ಉ॥ ಕುಮುದ ನವೀನಮೊಲ್ಲೆ ಸುರಹೊನ್ನೆ ಸುಮಾದಲ ಲೊಕ್ಕಿ ನೈದಿಲು
ತ್ತಮವಹ ಕೆಂಪುದಾವರೆಗಳಾ ಬಲುಗೇದಗೆ ಮಾವು ಚಂಪಕಂ ।
ಸುಮನಸಪೂರಪಾದರಿಯು ಮಲ್ಲಿಗೆ ಬಾಳೆಯಶೋಕೆ ಜಾಜಿ ತ
ತ್ಕ್ರಮದೆ ಶಿರೀಷಮಿಂತಿವು ವಿರಾಜಿಪ ಕಾಮನ ಷೋಡಶಾಸ್ತ್ರಗಳ್ ॥ ೧ ॥

b ಇನಿವಿಲ್ಲಂಬುಜನಾಳಮು
ಮನುನಯದಿಂ ಪಚ್ಚೆಯಲರ ಮಾವಿನ ತಳಿರುಂ ।
ಘನವೆನಿಪ ಕುಸುಮಮಂಜರಿ
ಮನಸಿಜಗಿವು ಕಾರ್ಮುಕಂಗಳಂಬುಜನಯನೇ ॥ ೨ ॥

c ಇನಿವಿಲ್ಲೆಸುಗೆಗೆ ಮಲ್ಲಿಗೆ
ಯನುನಯದಿಂ ಪುಷ್ಪಮಂಜರಿಗೆ ತಾಮರಸಂ ।
ಘನವಾದ ತಳಿರ್ವಿಲ್ಲಿಗೆ
ಕೊನರುತ್ತೆಸಗುವುದಶೋಕೆ ತಪ್ಪದು ತರುಣೀ ॥ ೩ ॥

d ತಾವರೆವಿಲ್ಲಿಗೆ ಚೂತಂ
ಭಾವಿಸು ನೀಂ ಮರಕತಕ್ಕೆ ನೈದಿಲ್ಗಣೆಯುಂ ।
ಅವರಿಸಿದಲಚೆಯಸುಗೆಗೆ
ತಾವರೆವಿಲ್ಲೆಂದು ಪೇಳ್ವುದಂಬುಜವದನೇ ॥ ೪ ॥

e ಉರಮುರುಣಸರಸಿಜಕ್ಕಂ ॥ ೫ ॥

f ಮೆಲ್ಲೆರ್ದೆಗೆ ಕಮಲ ಬಲ್ಮೊಲೆ
ಯಲ್ಲಿಗೆ ನವಚೂತ ಮಕ್ಷಿಯೆಡೆಗಮಶೋಕಾ ।
ಪಲ್ಲವ ಮಸ್ತಕದಲ್ಲಿಗೆ
ಮಲ್ಲಿಗೆ ನಾಣೆಡೆಗೆ ಮದನ ನೈದಿಲ ಗೆಲವಂ ॥ ೬ ॥

ದೊಣೆಯೊಳ್ಪನ್ನೊಂದಂಬ್ಬೆ
ಗಣೆಯೊಳ್ಕೈಗೈಸಿ ಮಿಕ್ಕು ರತಿಪತಿ ವೀರಂ ।
ಗಣಿಯಿಪನೆ ಮಿಕ್ಕರಾರುವ
ಪಡೆಗಂಣುಳ್ಳವನನೆಚ್ಚ ಕುಸುಮಾಸ್ತ್ರಗಳಿಂ ॥ ೧೬ ॥

ಕೆಂದಾವರೆಗಾಕಾಶಮು
ದಂದಾಗಣಪತಿಯಶೋಕೆಗಂ ಪತಿ ಚೂತ ।
ಕ್ಕಂದು ಭಯಂಕರಸರ್ಪಂ
ಸಂದಂ ಮಲ್ಲಿಗೆಗೆಯಗ್ನಿ ಯುತ್ಪಲಕೆ ಶಿವಂ ॥ ೧೭ ॥

ಮಿಗಿಲಭಿಲಾಷೆ ಚಿಂತೆಗೆ ಸರೋಜ ಸುಯಿಲ್ತ್ರಪನಕ್ಕಶೋಕ ತಾಂ
ಸೊಗಸಳಿದಂಗಕಂದಿಯುಣಿಸಂ ತೊರೆಯಲ್ಕವಚೂತಮಂತು ತಾ ।
ಬಗೆವಿಕಳತ್ವ ಮೌನಮುರೆ ಮಲ್ಲಿಗೆಗಂದತಿಮೂರ್ಛೆ ಜೀವಮಂ
ತಗವ[೧೭] ಶರೀರಮಂ ಕುಮುದದಿಂದೆಸಲಂಗಜನೊಲ್ದಗಲ್ದರಂ ॥ ೧೮ ॥

ಉರಮರುಣಸರಸಿಜಕ್ಕಂ
ನಿರತಂ ನೇತ್ರಗಳಶೋಕಕಂ ಕುಚಗಳ್ಮಾ ।
ಮರಕಂ ಮಸ್ತಕಮಲ್ಲಿಗೆ
ಯರಳಿಂಗುತ್ಪಲಕೆ ಯೋನಿ ಗುರಿಯಾಗಿರ್ಕುಂ ॥ ೧೯ ॥

ಆ ಯೆಂಬೀ ಸ್ವರಮಬ್ಜಕೆ
ಈ ಯೆಂಬೀ ಸ್ವರಮಶೋಕೆಯಂಬಿಂಗಂ ತಾಂ ।
ಊ ಯೆಂಬೀ ಸ್ವರ ಮಾವಿಗೆ
ಏ ಯೆಂಬಿದು ಮಲ್ಲಿಕಕ್ಕೆ ಓ ವುತ್ಪಲಕಂ ॥ ೨೦ ॥

ಈ ಮಂತ್ರಗಳಿಂ ಮಂತ್ರಿಸಿ
ಕಾಮಂ ಕಾರ್ವಿಲ್ಲನಾರಿ ವಿನಿದ್ಯೆಗಣೆಯಂ ।
ಪ್ರೇಮದಿನಿರ್ದರಗಲ್ದೊಡೆ
ಕಾಮಂ ನಿಸದೆಚ್ಚು ಕೊಲ್ವ ನಿಷ್ಕಾಮತೆಯಿಂ ॥ ೨೧ ॥

**ಮೋಹಭೇದಗಳ ವಿವರ**

ಕುಸುಬೆಯ ಪೂವಿನ ಬಂಣಂ
ಪೊಸತಾಗಿರೆ ರಂಜಿಸಿರ್ದು ಮೊದಲೊಳ್ಮತ್ತಂ ।
ಮಸುಳಿಪ ತೆರದಿಂ ನೇಹಂ
ಪಸರಿಸಿ ಬಿಡೆ ಚಂದ್ರಿಕಾಸಮಂ ತಾನೆಂಬರ್ ॥ ೨೨ ॥

೧೭. ತಗಲೆ (ಧಾ).

ಪರಿಕಿಸೆ ನೀಲಿಯ ಬಂಣಂ
ಬರೆವರೆ ಮೊದಲಂತೆ ವರ್ಣಮಿಲ್ಲಂ ಬಿಟ್ಟುಂ ।
ಪರೆಯದುಮಾತೆರದಿಂ ನಿಂ
ತಿರೆ ಮೋಹಂ ನೀಲಿವಂಣಮೆಂಬರ್ಬಲ್ಲರ್ ॥ ೨೩ ॥

ಚಿರುವೇರಿನ ಬಣ್ಣಂ ಮಿಗೆ
ಪರಿಯಲ್ಕಂಬರವ ಬಿಡದುಮಾತೆರದಿಂ ತಾಂ ।
ತುರುಗಿರ್ಪ ನೇಹವಾತನು
ಮರವಂನಂ ಬಿಡದು ಮೈದೊರದುಮಾಯಾಸಂ ॥ ೨೪ ॥

ಮೂದೆರದ ಮೋಹಮಲ್ಲದೆ
ಕಾದಲೆ ಬೇರಿನ್ನು ಮೋಹ ಮತ್ತೊಂದಿಲ್ಲಂ ।
ಭೇದಕವೀಬಗೆ ಮೂರರು
ಪಾಧಿಯೊಳಂ ಪಲವು ತೆರದೆ ನೇಹಮನುಸುರ್ವರ್ ॥ ೨೫ ॥

ಪಿಂದನ ಜನ್ಮದ ಋಣಸಂ
ಬಂಧದ ಮೋಹಮುಮದೊಂದು ವಿದ್ಯಾಮೋಹಂ ।
ಸಂಧಿಸುಗು ಕಾಮಕಳೆಗಳ
ಬಂಧಗಳಂ ಚಿತ್ರರತಿಯ ಮೋಹಮದೊಂದುಂ ॥ ೨೬ ॥

ಮಂದಾನಿಲ ಚಂದ್ರೋದಯ
ಸುಂದರನುಡಿವಕ್ಕಿ ಕೋಕಿಲಾಳಾಪಕ್ಕಂ ।
ಬಂದು ಮೊರೆವಳಿಗೆ ವಿರಹಂ
ಕುಂದದು ಬನದೊಳ್ ಬಸಂತನೈತರೆ ಕಾಂತೇ ॥ ೨೭ ॥*

ವಾಣಿಯ ವಾಕ್ಚತುರಿನ ಪೊಸ
ತಾಣ ಕಲಾಳಿಗಳ ಪೊಸರಸೋದ್ಭಾವಗಳೊಳ್ ।
ಜಾಣಿನ ನೆಲೆವನೆ ಯೆನಿಸಿದ
ಕ್ಷೋಣಿಯೊಳಭಿನವಸುಕೇಶಿರಾಜಕವೀಶಂ ॥ ೨೮ ॥

ಇದಖಿಲಸುಕವಿಜನೋತ್ತುಂಗಾಭಿನವಕೇಶಿರಾಜವಿರಚಿತ ಕವಿಜಿಹ್ವಾಬಂಧನಾಖ್ಯಪ್ರಬಂಧದೊಳ್
ಚತುರ್ಥಾಶ್ವಾಸಂ ಸಮಾಪ್ತಂ.

ಶ್ರೀಶ್ರೀಶ್ರೀ

---

* ಈ ಪದ್ಯವು ಧಾಪ್ರತಿಯಲ್ಲಿಲ್ಲ.

# ಅನುಬಂಧ ೧

## ಪದ್ಯಗಳ ಹೋಲಿಕೆಯ ಪಟ್ಟಿ

| ಬೆಂಗಳೂರು ಮುದ್ರಣ | ಧಾರವಾಡದ ಮುದ್ರಣ | ಮದರಾಸಿನ ಮುದ್ರಣ |
|---|---|---|
| ೧ | ೧ | — |
| ೨ | ೮ | ೨ |
| ೩ | ೯ | ೩ |
| ೪ | ೧೦ | ೪ |
| ೫ | ೧೩ | ೭ |
| ೬ | ೧೫ | ೮ |
| ೭ | ೪೯ | ೪೨ |
| ೮ | ೧೭ | — |
| ೯ | ೧೮ | ೧೦ |
| ೧೦ | ೧೯ | ೧೧ |
| ೧೧ | ೨೦ | ೧೨ |
| ೧೨ | ೨೧ | — |
| ೧೩ | ೨೨ | ೧೩ |
| ೧೪ | ೨೩ | ೧೪ |
| ೧೫ | ೨೫ | ೧೫ |
| ೧೬ | ೨೭ | ೧೮ |
| ೧೭ | ೨೮ | ೧೯ |
| ೧೮ | ೨೯ | ೮೩ |
| ೧೯ | ೩೧ | ೨೧ |
| ೨೦ | ೩೨ | ೨೪ |
| ೨೧ | ೩೩ | ೨೫ |
| ೨೨ | ೩೪ | ೨೬ |
| ೨೩ | ೩೫ | — |
| ೨೪ | ೩೬ | — |
| ೨೫ | ೩೭ | — |
| ೨೬ | ೩೮ | — |
| ೨೭ | ೩೯ | ೨೮ |
| ೨೮ | ೪೦ | — |
| ೨೯ | ೪೧ | — |
| ೩೦ | ೪೨ | ೩೧ |
| ೩೧ | ೪೩ | ೩೨ |
| ೩೨ | ೪೪ | ೩೩ |
| ೩೩ | ೪೫ | — |
| ೩೪ | ೪೬ | ೩೪ |
| ೩೫ | ೪೭ | ೩೫ |
| ೩೬ | ೪೮ | ೩೬ |
| ೩೭ | ೫೩ | ೪೦ |
| ೩೮ | ೫೪ | ೪೧ |
| ೩೯ | ೫೫ | — |
| ೪೦ | ೫೬ | ೪೪ |
| ೪೧ | ೫೭ | ೪೫ |
| ೪೨ | ೫೮ | — |
| ೪೩ | ೫೯ | ೪೭ |
| ೪೪ | ೬೦ | ೪೮ |
| ೪೫ | ೬೧ | ೪೯ |
| ೪೬ | ೬೨ | ೫೦ |
| | II | |
| ೧ | ೪ | ೯೯ |
| ೨ | ೫ | ೧೦೦ |
| ೩ | ೬ | ೧೦೧ |
| ೪ | ೭ | ೧೦೨ |
| ೫ | ೮ | ೧೦೩ |
| ೬ | ೮ | ೧೦೫ |
| ೭ | ೯ | ೧೦೪ |
| ೮ | ೧೦ | — |
| ೯ | ೧೧ | ೧೦೭ |
| ೧೦ | ೧೨ | ೧೦೮ |
| ೧೧ | ೧೩ | ೧೦೯ |
| ೧೨ | ೧೪ | ೧೧೦ |
| ೧೩ | ೧೫ | ೧೧೧ |
| ೧೪ | ೨೦ | ೧೧೪ |
| ೧೫ | ೧೯ | ೧೧೫ |
| ೧೬ | ೨೨ | ೧೧೮ |
| ೧೭ | ೨೦ | ೧೧೬ |

| ಬೆಂಗಳೂರು ಮುದ್ರಣ | ಧಾರವಾಡದ ಮುದ್ರಣ | ಮದರಾಸಿನ ಮುದ್ರಣ |
|---|---|---|
| ೧೮ | ೨೪ | — |
| ೧೯ | ೨೫ | — |
| ೨೦ | ೨೬ | — |
| ೨೧ | ೨೭ | ೧೪೬ |
| ೨೨ | * ೩೯ | — |
| ೨೩ | ೩೭ | ೧೫೮ |
| ೨೪ | * ೪೬ | — |
| | III | |
| ೧ | ೪ | — |
| ೨ | ೫ | ೮೪ |
| ೩ | ೬ | — |
| ೪ | ೭ | — |
| ೫ | ೮ | — |
| ೬ | ೧೧ | — |
| ೭ | ೧೦ | ೮೫ |
| ೮ | ೧೨ | — |
| ೯ | ೧೩ | — |
| ೧೦ | ೧೪ | — |
| ೧೧ | ೧೫ | — |
| ೧೨ | ೧೬ | — |
| ೧೩ | ೧೭ | — |
| ೧೪ | ೧೮ | — |
| ೧೫ | ೧೯ | — |
| ೧೬ | ೨೦ | — |
| ೧೭ | ೨೧ | — |
| ೧೮ | ೨೨ | — |
| ೧೯ | ೨೩ | — |
| ೨೦ | ೨೪ | — |
| ೨೧ | ೨೫ | — |
| ೨೨ | ೨೬ | — |
| ೨೩ | — | — |
| ೨೪ | — | — |
| ೨೫ | ೨೭ | — |
| ೨೬ | ೩೦ | — |
| ೨೭ | ೩೧ | — |
| ೨೮ | ೩೨ | — |
| ೨೯ | ೩೩ | — |
| ೩೦ | ೩೪ | — |
| ೩೧ | ೩೯ | ೮೭ |
| ೩೨ | — | — |
| ೩೩ | — | ೭೭ |
| ೩೪ | (I ೧೪) | ೯ |
| ೩೫ | ೨೮ | — |
| ೩೬ | ೪೦ | — |
| | IV | |
| ೧ | — | — |
| ೨ | — | — |
| ೩ | — | — |
| ೪ | — | — |
| ೫ | ೧೦ | — |
| ೬ | ೧೧ | — |
| ೭ | ೧೨ | — |
| ೮ | ೧೩ | — |
| ೯ | ೧೪ | [೫೯] |
| ೧೦ | ೧೫ | ೮೮ [೬೧] |
| ೧೧ | ೧೬ | ೮೯ |
| ೧೨ | ೧೮ | — |
| ೧೩ | ೧೯ | — |
| ೧೪ | ೨೧ | — |
| ೧೫ | ೨೨ | — |
| ೧೬ | ೨೩ | — |
| ೧೭ | ೨೪ | — |
| ೧೮ | ೨೫ | — |
| ೧೯ | ೨೬ | — |
| ೨೦ | ೨೮ | — |
| ೨೧ | ೨೯ | — |
| ೨೨ | ೩೦ | — |
| ೨೩ | ೩೧ | — |
| ೨೪ | ೩೨ | — |
| ೨೫ | ೩೩ | — |
| ೨೬ | ೩೪ | — |
| ೨೭ | — | — |
| ೨೮ | ೪೦ | — |

[ ] ಇವು ೩ನೆಯ ಪರಿಶಿಷ್ಟದಲ್ಲಿ ಕೊಡಲ್ಪಟ್ಟಿವೆ.

# ಅನುಬಂಧ ೨

## ಪದ್ಯಗಳ ಅಕಾರಾದಿ

ಶ್ರೀಕಂಠಯ್ಯ ಅಚ್ಚುಕೂಟ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨